# PACKAGE TOURS

Hotel Room Accom. & South Indian Veg. Food

## SOUTH INDIA : 10 DAYS
Jan 28

Guruvayur, Kaladi, Trivandram, Kovalam Beach, Suchindram, Kanyakumari, Rameshwaram, Madurai, Trichy, Srirangam, Tanjore, Kumbakonam, Chidambaram, Thiruvannamalai, Navagraha Temples

## SHAKTIPEETHA MANALI SPECIAL : 18 DAYS
Apr 18

Attari Border [Indo-Pak Border], Amritsar, Chandigarh, Shimla, Kufri, Kullu, Manali, Rohtang Pass (Optional), Vashishta, Baijnath, Chamunda, Naina Devi, Kangra, Chintpurni, Jwalamukhi, Vaishnavi Devi, Kurukshetra, New Delhi

## KOLKATA - DARJEELING : 16 DAYS
Apr 11

Darjeeling, Gangtok, Siliguri, Kolkata, Puri, Konark, Chilka Lake, Bhuvaneshwar

## CHARODHAM KASHI GAYA : 19/26 DAYS
May 09,14 June 06

Haridwar, Yamunotri, Gangotri, Uttarkashi, Kedar, Triyugi (Optional), Mana, Vyasa Guha, Ganesh Guha, Keshava Prayag, Badari, Rishikesh, New Delhi, Allahabad, Ayodhya, Saranath, Gaya, Bodhgaya, Kashi

## MINI ANDHRA : 05 DAYS
Jan 23 Feb 07

Mantralaya, Srishaila, Mahanandi, Ahobilam (Nava Narasimha)

## KASHI - NAIMISHARANYA - CHITRAKOOT : 14 DAYS
Mar 10

Kashi, Ayodhya, Naimisharanya, Allahabad, Chitrakoot, Gaya, Bodhgaya

## HOLY MOUNT KAILASH & MANASA SAROVARA YATRA
May / June / July

## INTERNATIONAL TOURS








Dubai, Singapore, Malaysia, Thailand, Sri Lanka



## Shri Hansaa Travels

Recognised by Department of Tourism, Govt. of Karnataka

: 640, 40th Cross, 8th Block, Jayanagar, Bangalore - 70
: hansaatravels@gmail.com : hansaatravels.com
080-26643276 / 26543891 / 9341215612 / 9341415612

ವ್ಯವಸ್ಥಾಪಕ ಸಂಪಾದಕರು
*ಸ್ವಾಮಿ ಮುಕ್ತಿದಾನಂದ*
ಸಂಪಾದಕರು
*ಸ್ವಾಮಿ ಜ್ಞಾನಯೋಗಾನಂದ*
ನೆರವು:
*ಆರ್. ಎಸ್. ಪೂರ್ಣಾನಂದ*
*ಡಾ. ಕೆ. ಎಲ್. ಪ್ರಸನ್ನಾಕ್ಷಿ*
*ಡಾ. ಎಚ್. ಪಾಂಡುರಂಗ ವಿಠಲ*

ಅಕ್ಷರ ಜೋಡಣೆ
*ಶ್ರೀರಾಮಕೃಷ್ಣ ಆಶ್ರಮ, ಮೈಸೂರು*
ಮುದ್ರಣ
*ಮಯೂರ್ ಗ್ರಾಫಿಕ್ಸ್, ಬೆಂಗಳೂರು*

E-mail:
mysuru.vivekaprabha@rkmm.org
Website: vivekaprabha.net
ಫೋನ್ : 9481533505

ಮುಖಪುಟ:
ಶಿಶಿರದ ನಸುಕು

**ಈ ಪತ್ರಿಕೆಯ ಧ್ಯೇಯ**

'ನಾವು ಪತ್ರಿಕೆಯ ಮೂಲಕ ಸಕಲ ವಿಚಾರಗಳಲ್ಲಿಯೂ ಜೀವನಪೋಷಕ ಆದರ್ಶಗಳನ್ನು ಜನರಿಗೆ ಕೊಡಬೇಕು... ವೇದವೇದಾಂತಗಳ ಉಚ್ಚ ಭಾವನೆಗಳನ್ನು ಸುಲಭವಾದ ಮಾತುಗಳಲ್ಲಿ ಜನರಿಗೆ ತಿಳಿಸಿಕೊಡಬೇಕು.'

– *ಸ್ವಾಮಿ ವಿವೇಕಾನಂದ*

**ಚಂದಾ ವಿವರ**

ಬಿಡಿ ಪ್ರತಿ : ₹ 14
ವಾರ್ಷಿಕ : ₹ 140
ಮೂರು ವರ್ಷ : ₹ 375
ಆಜೀವ (25 ವರ್ಷ): ₹ 3,000
ಪೋಷಕರು : ₹ 5,000 ಅಥವಾ ಹೆಚ್ಚು.

ವಿದೇಶಗಳಿಗೆ : (ಏರ್‌ಮೇಲ್)
ವಾರ್ಷಿಕ : $ 20; ಮೂರು ವರ್ಷ : $ 60
ಆಜೀವ (25ವರ್ಷ): $ 300
ಪೋಷಕರು : $ 600 ಅಥವಾ ಹೆಚ್ಚು.

ಚಂದಾ ಹಣವನ್ನು (Sri Ramakrishna Ashrama, Viveka Prabha A/c ಹೆಸರಿಗೆ) ಎಂ.ಓ. ಅಥವಾ ಡಿ.ಡಿ. ಮೂಲಕ ಮಾತ್ರ ಕಳುಹಿಸಬೇಕು. ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ. ಆಜೀವ ಚಂದಾದಾರರು ಮತ್ತು ಪೋಷಕರಿಗೆ ಮೈಸೂರು ಆಶ್ರಮದ ಪುಸ್ತಕಗಳ ಮೇಲೆ ಮೈಸೂರು ಆಶ್ರಮದ ಮೂಲಕ ನೇರವಾಗಿ ಕೊಂಡಾಗ ಮಾತ್ರ ಶೇ. 20 ರಷ್ಟು ರಿಯಾಯಿತಿ ಕೊಡಲಾಗುವುದು. ಪೋಷಕ ಸಹಾಯಧನಕ್ಕೆ 80-G ಅಧಿನಿಯಮದ ಪ್ರಕಾರ ವರಮಾನ ತೆರಿಗೆ ವಿನಾಯಿತಿ ಇದೆ. ಪೋಷಕರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.

ಫೆಬ್ರವರಿ-2016 ಸಂಪುಟ 17 ಸಂಚಿಕೆ 02



# ವಿವೇಕ ಪ್ರಭ


## ಪರಿವಿಡಿ





























ಪ್ರಾರ್ಥನೆ

## ಶ್ರೀ ಶ್ರೀ ವಿವೇಕಾನಂದರಿಗೆ

ರಾಗ -ಬಾಗೇಶ್ರೀ, ತಾಲ-ಝಂಪೆ

ಮೂರು ನಾಮದ ಮುನಿಯೆ । ಮೂರು ಲೋಕದ ಮಣಿಯೆ ॥ ಪ ॥

ಹ್ರೀಂಕಾರವನು ಮೆಟ್ಟಿ । ಓಂಕಾರವನೆ ನುಡಿದು
ಭಾರತಿಯ ಬೆಳ್ಜಸವ ಮುಗಿಲಲ್ಲಿ ಮಿನುಗಿಸಿದ ॥ ಅ.ಪ.॥

'ವಿಶ್ವೇಶ್ವರ'ನೆ ನೀನು । ವಿಶ್ವವನು ವಿಸ್ತರಿಸಿ
ಸ್ವಸ್ತಿ ! ಭಾರತಿಗೆನುತ । ವಿಶ್ವವನು ವ್ಯಾಪಿಸಿದೆ ॥ ೧ ॥

ನರಕುಲವನುದ್ಧರಿಸಿ । ನರಹರಿಯ ಪದತಳಕೆ
ಬೆರಿಸಿ ಮೆರೆಸಿದ ಶರಣ । ವರ 'ನರೇಂದ್ರ'ನೇ ಧನ್ಯ ॥ ೨ ॥

'ಈ' ವಿಷಯಗಳ ತೊರೆದು । 'ಆ'ವೊಂದರಲಿ ಬೆರೆದು
ಶ್ರೀ 'ವಿವೇಕಾನಂದ' । ಭೂವಂದ್ಯನಾಗಿರ್ದ ॥ ೩ ॥

ಶುದ್ಧ ಹೇತುವಿನಿಂದೆ । ಬದ್ಧಕಂಕಣನಾಗು
ನಿದ್ದೆಯಿಂದೇಳೆಂದು । ಬುದ್ಧಿಗಲಿಸಿದ ಗುರುವೆ ॥ ೪ ॥

ಮೂಡು ! ನನ್ನೊಳು ಮೂಡು । ಬಾಡಿ ಬಳಲುವೆ ನೋಡು !!
ಕಾಡು ಹಕ್ಕಿಯ ಹಾಡಿ । ಗೋಡು ಬಾ ! ಬಾ! ಓಡು ॥ ೫ ॥

**- ಮಧುರಚೆನ್ನ**

*('ನನ್ನ ನಲ್ಲ' ಸಂಕಲನದಿಂದ)*



ಸೂಕ್ತಿಪ್ರಭ

## ಸ್ವಾಮಿ ವಿವೇಕಾನಂದರ ಉಪದೇಶಗಳು

◆ ವೈವಿಧ್ಯವೇ ಸೃಷ್ಟಿ. ಒಂದೇ ಸಮನಾಗಿರುವುದು ಅಥವಾ ಸಮತ್ವವೇ ದೇವರು. ವೈವಿಧ್ಯದಿಂದ ಪಾರಾಗಿ. ಆಗ ನೀವು ಜನನ ಮರಣಗಳನ್ನು ಗೆಲ್ಲುವಿರಿ. ಆಗ ನೀವು ನಿತ್ಯವೂ ಸಮತ್ವದಲ್ಲಿರುವಿರಿ, ದೇವರಲ್ಲಿರುವಿರಿ, ದೇವರೇ ಆಗಿರುವಿರಿ.

◆ ತಾಯಿಯ ಒಂದು ಚೂರು, ಒಂದು ಹನಿಯೇ ಕೃಷ್ಣ, ಮತ್ತೊಂದು ಬುದ್ಧ, ಮಗದೊಂದು ಕ್ರಿಸ್ತ. ಜಗನ್ಮಾತೆಯ ಕೇವಲ ಒಂದು ಕಿಡಿಯಾದ ನಮ್ಮ ಜನ್ಮದಾತೆ ತಾಯಿಯನ್ನು ಪೂಜಿಸಿದರೂ ಅದು ನಮ್ಮನ್ನು ಮಹತ್ತಿನ ಕಡೆಗೆ ಒಯ್ಯುವುದು. ನಿಮಗೆ ಜ್ಞಾನ, ಭಕ್ತಿಗಳು ಬೇಕಾದರೆ ಜಗನ್ಮಾತೆಯನ್ನು ಪೂಜಿಸಿ.

◆ ಹಾಲಿನಲ್ಲಿ ಬೆಣ್ಣೆಯಿರುವಂತೆ ಬ್ರಹ್ಮವು ವಿಶ್ವದಲ್ಲಿ ಸರ್ವವ್ಯಾಪಿಯಾಗಿರುವುದು. ಆದರೆ ಕಡೆಯುವುದರ ಮೂಲಕ ಅದು ಒಂದು ಕಡೆ ವ್ಯಕ್ತವಾಗುವಂತೆ ಮಾಡಬಹುದು. ಹಾಲನ್ನು ಕಡೆದು ಬೆಣ್ಣೆ ತೆಗೆಯುವಂತೆ ಧ್ಯಾನದ ಮೂಲಕ ಜೀವಿಯಲ್ಲಿ ಬ್ರಹ್ಮಸಾಕ್ಷಾತ್ಕಾರವಾಗುತ್ತದೆ.



◆ ಶ್ರೇಷ್ಠವಾದುದನ್ನು ಅರಸಿ. ಯಾವಾಗಲೂ ಶ್ರೇಷ್ಠವಾದುದನ್ನೇ ಅರಸಿ. ಅನಂತಾನಂದವಿರುವುದು ಶ್ರೇಷ್ಠವಾದ ವಸ್ತುವಿನಲ್ಲೇ. ನಾನು ಬೇಟೆಯಾಡಬೇಕಾದರೆ ಸಿಂಹವನ್ನು ಬೇಟೆಯಾಡುವೆನು. ದರೋಡೆ ಮಾಡಬೇಕಾದರೆ ರಾಜನ ಬೊಕ್ಕಸವನ್ನು ದರೋಡೆ ಮಾಡುತ್ತೇನೆ, ಯಾವಾಗಲೂ ಶ್ರೇಷ್ಠವಾದುದನ್ನೇ ಅರಸಿ.

◆ ವಿಶ್ವವೆಲ್ಲ ಏಕ. ಅಲ್ಲಿ ಮತ್ತೊಂದು ಇಲ್ಲ. ಭಿನ್ನತೆಯಿಂದ ನಾವೆಲ್ಲ ಏಕತ್ವದ ಕಡೆಗೆ ಹೋಗುತ್ತಿರುವೆವು. ಕುಲಗಳು ಪಂಗಡಗಳಲ್ಲಿ, ಪಂಗಡಗಳು ಜನಾಂಗಗಳಲ್ಲಿ, ಜನಾಂಗಗಳು ರಾಷ್ಟ್ರಗಳಲ್ಲಿ ರಾಷ್ಟ್ರಗಳು ಮಾನವಕೋಟಿಯಲ್ಲಿ ಐಕ್ಯವಾಗುತ್ತಿವೆ. ಒಂದರಲ್ಲಿ ಎಷ್ಟೊಂದು ಇಚ್ಛೆಗಳು ಸೇರುತ್ತಿವೆ! ಈ ಏಕತೆಯ ಸಾಕ್ಷಾತ್ಕಾರವೇ ಜ್ಞಾನ ಮತ್ತು ವಿಜ್ಞಾನ. ಏಕತೆಯೇ ಜ್ಞಾನ, ಭಿನ್ನತೆಯೇ ಅಜ್ಞಾನ. ಈ ಜ್ಞಾನವೇ ನಿಮ್ಮ ಆಜನ್ಮಸಿದ್ಧ ಹಕ್ಕು.



# ಶ್ರೀ ಮಾರಿಕಾಂಬಾ ದೇವಸ್ಥಾನ, ಶಿರಸಿ (ಉ.ಕ.)

## ಶ್ರೀ ದೇವಿಯ ಸನ್ನಿಧಿಯಲ್ಲಿ ನಡೆಯುವ ಸೇವೆಗಳು



| | | |
|---|---|---|
| 1 | ಕುಂಕುಮಾರ್ಚನೆ ಸಹಿತ ಮಂಗಳಾರತಿ | ರೂ. 5-00 |
| 2 | ಪುಷ್ಪಾಂಜಲಿ ಅರ್ಚನೆ (ಹೂವಿನಿಂದ ಅರ್ಚನೆ) | 5-00 |
| 3 | ಅಷ್ಟೋತ್ತರ ಕುಂಕುಮಾರ್ಚನೆ | 10-00 |
| 4 | ಉಡಿ | 15-00 |
| 5 | ಪಂಚಾಮೃತ ಅಭಿಷೇಕ | 15-00 |
| 6 | ಮಹಾಪೂಜೆ | 75-00 |
| 7 | ಪಂಚರಸ ಫಲಾಭಿಷೇಕ ಅರ್ಚನೆ | 100-00 |
| 8 | ಪುಷ್ಪಾಲಂಕಾರ ಪೂಜೆ | 300-00 |

## ಶಾಶ್ವತ ಸೇವೆಗಳು

**(ವರ್ಷದಲ್ಲಿ ಒಂದು ದಿನದ ಪೂಜಾ ಅವಕಾಶ)**

| | | |
|---|---|---|
| 1 | ಭಕ್ತಕೋಟಿ ನಿಧಿ ಸಂಚಯನದ ಅನ್ನಸಂತರ್ಪಣೆ | ರೂ. 2001-00 |
| 2 | ನಿರಂತರ ಸೇವೆ (ಸಪ್ತಶತಿ ಪಾರಾಯಣ) | 2001-00 |
| 3 | ನಿರಂತರ ಸೇವೆ (5 ಜನಮುತ್ತೈದೆಯರಿಗೆ ಉಡಿ ತುಂಬುವುದು ಹಾಗೂ ಪಾರಾಯಣ) | 6001-00 |
| 4 | ಪಲ್ಲಕ್ಕಿ ಉತ್ಸವದ ಪೂಜೆಯ ಬಗ್ಗೆ | 6001-00 |
| 5 | ದೀಪೋತ್ಸವ (ಶಾಶ್ವತ ದೀಪೋತ್ಸವ) | 6001-00 |

ಈ ಎಲ್ಲಾ ಸೇವೆಗಳಿಗೆ ದೇಣಿಗೆ ಸಲ್ಲಿಸುವವರು ಅಧ್ಯಕ್ಷರು, ಶ್ರೀಮಾರಿಕಾಂಬಾ ದೇವಸ್ಥಾನ, ಶಿರಸಿ (ಉ.ಕ.) ಇವರ ಹೆಸರಿಗೆ ಡಿ.ಡಿ. ಮುಖಾಂತರ ಅಥವಾ ನೇರವಾಗಿ ಈ ಕೆಳಗಿನ ಶ್ರೀ ದೇವಸ್ಥಾನದ ಬ್ಯಾಂಕ್ ಖಾತೆಗೆ ಸಂದಾಯ ಮಾಡಬಹುದು.

ಸಿಂಡಿಕೇಟ್ ಬ್ಯಾಂಕ್, ಬನವಾಸಿ ರಸ್ತೆ ಶಾಖೆ, ಬನವಾಸಿ ರಸ್ತೆ, ಶಿರಸಿ (ಉ.ಕ.) 581 401
Bank a/c no: 03672200000012, Bank IFSC Code: SYNB0000367

ಸದ್ ಭಕ್ತರು ಶ್ರೀ ದೇವಾಲಯಕ್ಕೆ ಆಗಮಿಸಿ ಶ್ರೀ ದೇವಿಯ ದರ್ಶನವನ್ನು ಪಡೆದು ಸೇವೆ ಸಲ್ಲಿಸಿ, ಅನ್ನದಾನದ ಪುಣ್ಯ ಕಾರ್ಯದಲ್ಲಿ ಭಾಗಿಗಳಾಗಿ ಶ್ರೀ ದೇವಿಯ ಆಶೀರ್ವಾದಯುಕ್ತ ಅನುಗ್ರಹಕ್ಕೆ ಪಾತ್ರರಾಗಬೇಕೆಂದು ವಿನಂತಿಸುವ,

**ಶ್ರೀ ರಾಜಾರಾಮ್ ಎಂ. ಹೆಗಡೆ** (ಅಧ್ಯಕ್ಷರು) **ಶ್ರೀ ಮಧುಕೇಶ್ವರ ಜಿ. ಹೆಗಡೆ** (ಉಪಾಧ್ಯಕ್ಷರು)

**ಧರ್ಮದರ್ಶಿಗಳು: ಶ್ರೀ ವಿ. ಯು. ಪಟಗಾರ, ಶ್ರೀ ಮಂಜುನಾಥ ಜಿ. ಸಾಗರಕರ, ಶ್ರೀಮತಿ ಜ್ಯೋತಿ ವಿ. ಭಟ್ಟ**

Ph: 08384-226360, email: sirsimarikamba@gmail.com, sirsimarikamba@rediffmail.com
website: www.sirsimarikamba.com, www.marikambatemple.com

# ವಿವೇಕಪ್ರಭ

**ಪರಿಪೂರ್ಣ ಜೀವನದ ಪರಮಾಪ್ತ ಪತ್ರಿಕೆ**

**ಶ್ರೀರಾಮಕೃಷ್ಣ ಆಶ್ರಮ, ವಿವೇಕಪ್ರಭ ಕಾರ್ಯಾಲಯ, ಯಾದವಗಿರಿ, ಮೈಸೂರು 570 020**



## ಚಂದಾ ಅರ್ಜಿ

ಮಾನ್ಯರೇ, (ನಿಮಗೆ ಸಂಬಂಧಿಸಿದ್ದನ್ನು ✓ ಮಾಡಿ)

☐ ನನ್ನನ್ನು / ಈ ಕೆಳಕಂಡ ಹೆಸರಿನವರನ್ನು 'ವಿವೇಕಪ್ರಭ' ಪತ್ರಿಕೆಯ ಚಂದಾದಾರರನ್ನಾಗಿ/ ಪೋಷಕರನ್ನಾಗಿ ಮಾಡಬೇಕಾಗಿ ವಿನಂತಿ

☐ ನನ್ನ/ ಕೆಳಕಂಡ ಹೆಸರಿನವರ ಚಂದಾವನ್ನು ನವೀಕರಿಸಬೇಕಾಗಿ ವಿನಂತಿ. ಈಗಿನ ಚಂದಾಸಂಖ್ಯೆ.........................

**ನನ್ನ ವಿಳಾಸ**

ನನ್ನ ಹೆಸರು...........................................................................

ವಿಳಾಸ...................................................................................

.............................................................................................

................................................ಪಿನ್.............................

ಚಂದಾ ವಿವರ: (ನಿಮಗೆ ಸಂಬಂಧಿಸಿದ್ದನ್ನು ✓ ಮಾಡಿ)

| 1 ವರ್ಷದ ಚಂದಾ ₹ 140 | 3 ವರ್ಷದ ಚಂದಾ ₹ 375 | ಆಜೀವ ಚಂದಾ ₹ 3000 | ಪೋಷಕರ ಸಹಾಯಧನ ₹ 5000 |
|---|---|---|---|

**ಪತ್ರಿಕೆ ಪಡೆಯುವವರ ವಿಳಾಸ**

ಹೆಸರು...................................................................................

ವಿಳಾಸ...................................................................................

.............................................................................................

................................................ಪಿನ್.............................

ಹಣವನ್ನು ಮನಿ ಆರ್ಡರ್ / ಡ್ರಾಫ್ಟ್ (ಶ್ರೀರಾಮಕೃಷ್ಣ ಆಶ್ರಮ, ವಿವೇಕಪ್ರಭ A/c ಹೆಸರಿನಲ್ಲಿ) ಮೂಲಕ ಕಳುಹಿಸುತ್ತಿದ್ದೇನೆ.

ವಿವರ.......................................................................

1. ಹೊರ ಊರಿನ ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ.
2. ವಿದೇಶಗಳಿಗೆ ಅನ್ವಯವಾಗುವ ಚಂದಾ ವಿವರಗಳಿಗೆ ಹಾಗೂ ಇತರ ವಿವರಗಳಿಗಾಗಿ ನಮಗೆ ಬರೆಯಿರಿ.

ಸಹಿ

ಸಂಪಾದಕೀಯ



# ಚಿರನೂತನ – ಚಿರಂತನ ಸ್ಫೂರ್ತಿ

ಅತ್ಯಂತ ಸ್ಫೂರ್ತಿದಾಯಕವಾಗಿ ಯುವಕರ ನಡುವೆ ಓಡಾಡಿ ಭಾಷಣ ಮಾಡುತ್ತ, ವಿದ್ಯಾರ್ಥಿಗಳಿಗೆ ಅಧ್ಯಯನ, ವ್ಯಕ್ತಿತ್ವ ವಿಕಸನ ಮುಂತಾದುವಲ್ಲಿ ತರಬೇತಿ ನೀಡುತ್ತ, ತನ್ನ ಇಡೀ ಜೀವನವನ್ನೇ ಸ್ವಾಮಿ ವಿವೇಕಾನಂದರ ಜೀವನ, ತತ್ತ್ವಗಳ ಪ್ರಚಾರ ಮಾಡಲು ಮುಡಿಪಾಗಿಟ್ಟ ವ್ಯಕ್ತಿಯೊಬ್ಬ ಸಿಕ್ಕಿದ. ''ಎಲ್ಲವನ್ನೂ ಬಿಟ್ಟು, ಜಗತ್ತಿನ ಎಲ್ಲ ಜಂಜಾಟಗಳ ನಡುವೆಯೂ ನೀನು ಸ್ವಾಮೀಜಿಯವರ ಕೆಲಸ ಮಾಡಲು ಹೊರಟಿದ್ದೀಯಲ್ಲಾ? ನಿನಗೇಕೆ ಈ ಮನಸ್ಸು ಬಂತು?'' ಎಂದು ಕೇಳಿದ್ದಕ್ಕೆ ಆತ ಹೇಳತೊಡಗಿದ: ''ಕಾಲೇಜು ಓದುತ್ತಿದ್ದೆ. ಎಲ್ಲೋ ಒಂದು ಕಡೆ, ಸ್ವಾಮೀಜಿ ಪುಸ್ತಕವೊಂದು ಸಿಕ್ಕಿತು. ಓದಿದೆ; ಮೊದಲ ಪುಟದಲ್ಲೇ ಸ್ವಾಮೀಜಿ ವಾಣಿ ನನ್ನನ್ನು ಸೆಳೆಯಿತು – 'ಒಂದು ಭಾವನೆಯನ್ನು ತೆಗೆದುಕೊಳ್ಳಿ. ಅದನ್ನು ನಿಮ್ಮ ಜೀವನದಲ್ಲಿ ಅಭ್ಯಾಸ ಮಾಡಿ. ಅದನ್ನೇ ಆಲೋಚನೆ ಮಾಡಿ. ಅದನ್ನೇ ಕನಸು ಕಾಣಿ. ಆ ಒಂದು ಭಾವನೆಗಾಗಿ ನಿಮ್ಮ ಬಾಳನ್ನೆಲ್ಲ ಸವೆಸಿ.' ಆಗಲೇ ನಾನು ತೀರ್ಮಾನ ಮಾಡಿದೆ, ನಾನು ಜೀವನದುದ್ದಕ್ಕೂ ಸ್ವಾಮಿ ವಿವೇಕಾನಂದರ ಸಂದೇಶಗಳನ್ನೇ ಓದುತ್ತೇನೆ, ಅವರ ಪ್ರೇರಣೆಯಿಂದಲೇ ಬದುಕುತ್ತೇನೆ ಎಂಬುದಾಗಿ. ಈಗ ನಾನು ಸ್ವಾಮೀಜಿ ಸಂದೇಶಗಳನ್ನೇ ಎಲ್ಲೆಡೆ ಹರಡುತ್ತಿದ್ದೇನೆ...''

ಸ್ವಾಮೀಜಿ ಜನ್ಮವೆತ್ತಿ ಇಂದಿಗೆ ೧೫೦ ವರ್ಷಗಳೇ ಕಳೆದಿರಬಹುದು; ಆದರೆ ಇಂದಿಗೂ ಅವರ ಚೇತನವು ಅನೇಕ ಮಂದಿ ತರುಣರ ಮೂಲಕ ಕೆಲಸ ಮಾಡುತ್ತಿದೆ. ವೃದ್ಧರಲ್ಲೂ ತರುಣರ ಹುರುಪು, ಸ್ಫೂರ್ತಿ ತುಂಬುವಂತೆ ಪ್ರೇರಣೆ ನೀಡುತ್ತಿದೆ. ಹತಾಶೆಯಿಂದ ಹದಗೆಟ್ಟ ಸಮಾಜದಲ್ಲೂ ಹೊಸ ಹುಟ್ಟು ಸಾಧ್ಯವೆಂಬ ಆಶಾಭಾವವನ್ನು ಮೂಡಿಸುತ್ತಿದೆ. ಭಾರತದ ಇನ್ನಾವ ಮಹಾನಾಯಕರಲ್ಲೂ ಕಂಡುಬರದ ಒಂದು ಅಸಾಧಾರಣ ಶಕ್ತಿ, ದಿವ್ಯತೆಯ ಪ್ರಚಂಡ ಪ್ರವಾಹ ವಿವೇಕಾನಂದರಲ್ಲಿ ಹರಿಯುತ್ತಿರುವುದನ್ನು ನಾವು ಕಾಣಬಹುದು. 'ನನ್ನ ದೇಹ ಬಿದ್ದು ಹೋಗಬಹುದು; ಆದರೆ ನನ್ನ ಆತ್ಮ ಕೆಲಸ ಮಾಡುತ್ತದೆ. ಪ್ರತಿಯೊಬ್ಬ ಮಾನವನೂ ತಾನು ಭಗವಂತನಲ್ಲಿ ಒಂದಾಗಿದ್ದೇನೆ ಎಂದು ಅರಿಯುವವರೆಗೂ ನಾನು ವಿರಮಿಸುವುದಿಲ್ಲ' ಎಂದಿದ್ದರು ಸ್ವಾಮೀಜಿ. ಈ ಮಾತು ನಿಜವೆಂಬುದನ್ನು ನಾವು ಇಂದಿಗೂ ಕಂಡುಕೊಳ್ಳಬಹುದು. ಅವರ ಮಾತುಗಳಿಂದ ಸ್ಫೂರ್ತಿ ಹೊಂದಿ, ಅವರ ಜೀವನ–ಉಪದೇಶಗಳನ್ನೇ ಅನುಸರಿಸಿ ಬದುಕಲು, ತನ್ನ ಸರ್ವಸ್ವವನ್ನೂ ತ್ಯಾಗಮಾಡಬಲ್ಲ ಅನೇಕ ಮಂದಿ ಯುವಕ, ಯುವತಿಯರು ನೂರೈವತ್ತು ವರ್ಷಗಳ ನಂತರವೂ ಸಿದ್ಧರಿದ್ದಾರೆ ಎಂದಾದರೆ, ಸ್ವಾಮೀಜಿ ಆಡಿದ ಮಾತುಗಳು ನಿಜವೆಂದೇ ಅರ್ಥವಲ್ಲವೆ?

ಸ್ವಾಮೀಜಿ ಜನಿಸಿದ ಪರಿಸರ, ಆಗಿನ ಸನ್ನಿವೇಶ, ಕೌಟುಂಬಿಕ ಹಿನ್ನೆಲೆ, ಸಾಮಾಜಿಕ ರೀತಿನೀತಿ ಇವೆಲ್ಲ ಅವರ ಜೀವನವನ್ನು ರೂಪಿಸುವಲ್ಲಿ ಮುಖ್ಯವಾದ ಪಾತ್ರವನ್ನು ವಹಿಸಿರಬಹುದು; ಆಗಿನ ಅಗತ್ಯಕ್ಕನುಗುಣವಾಗಿ ಅವರ ಭಾವನೆ, ಚಿಂತನೆಗಳು ರೂಪುಗೊಂಡಿರಬಹುದು. ಆದರೂ ಅವು ತಮ್ಮ ಸೀಮಿತ ವಲಯದಾಚೆ, ಕಾಲ–ದೇಶಗಳ ಮಿತಿಯನ್ನು ಮೀರಿ ನಿಂತು ಸಾರ್ವತ್ರಿಕ ಮೌಲ್ಯಗಳನ್ನು ಎಲ್ಲೆಡೆ ಪಸರಿಸುತ್ತಿವೆ. ಎಲ್ಲ ಕಾಲಕ್ಕೆ, ಎಲ್ಲ ಪ್ರದೇಶಕ್ಕೆ ಸಲ್ಲುವ ಸ್ವಾಮೀಜಿ ಉಪದೇಶಗಳು ಹಲವು ಸಂದರ್ಭಗಳಲ್ಲಿ, ಹಲವು ಕಾರಣಗಳಿಂದಾಗಿ ಪ್ರಾಯೋಗಿಕವೆನಿಸುತ್ತವೆ; ಒಂದರ್ಥದಲ್ಲಿ ಸೀಮಿತ ವಿಷಯಕ್ಕೆ ಅನ್ವಯವಾಗುತ್ತಲೂ, ಇನ್ನೊಂದು ವಿಶಾಲ ಅರ್ಥದಲ್ಲಿ ಎಲ್ಲ ಮಿತಿಗಳನ್ನೂ ಮೀರಿ ಸಾರ್ವತ್ರಿಕವಾಗುತ್ತಲೂ ವಿಶಿಷ್ಟವೆನಿಸುತ್ತವೆ.

### ಅವರ ವ್ಯಕ್ತಿತ್ವದ ಅಗಾಧತೆ

ಸ್ವಾಮಿ ವಿವೇಕಾನಂದರ ಮಾತುಗಳ ಹಿಂದಿರುವ ಶಕ್ತಿಯೆಂಥದು, ಆ ಶಕ್ತಿ ಹೊರಹೊಮ್ಮಿ ಬರಲು ಕಾರಣವಾದ ಮೂಲ ದ್ರವ್ಯ ಯಾವುದು ಎಂದು ಪ್ರಶ್ನಿಸಿದರೆ ಹಲವು ಉತ್ತರಗಳನ್ನು ನೀಡಬಹುದು. ೧) ಶ್ರೀರಾಮಕೃಷ್ಣರಂತಹ ಮಹಾಪುರುಷರ, 'ಅವತಾರ ವರಿಷ್ಠ'ರ ಶಿಷ್ಯತ್ವ, ಅವರಿಂದ ಪಡೆದ ತರಬೇತಿ ೨) ಸ್ವತಃ ವಿವೇಕಾನಂದರೇ ಶಿವನ ಅವತಾರವಾಗಿದ್ದರು ೩) ವೈಜ್ಞಾನಿಕ, ಆಧುನಿಕ ವಿಚಾರಧಾರೆಗಳನ್ನು ಮೇಳೈಸಿಕೊಂಡ ಸಮತೋಲನದ ಜ್ಞಾನ ಭಂಡಾರ ೪) ಮಾನವ ಕೋಟಿಯ ಮೇಲೆ ಅವರಿಗಿದ್ದ ಅಪ್ರತಿಮ ಪ್ರೇಮ, ಕರುಣೆ, ಹಾಗೂ ೫) ಅವರ ಮೂಲಕ ಜಗನ್ಮಾತೆಯ ಶಕ್ತಿ ಕೆಲಸ ಮಾಡುತ್ತಿದ್ದುದು. ಈ ಎಲ್ಲ ಉತ್ತರಗಳೂ ನಿಜ; ಇಷ್ಟಲ್ಲದೆ ಇನ್ನೂ ಅನೇಕ ಸಂಗತಿಗಳನ್ನೂ ನಾವು ಕಂಡುಕೊಳ್ಳಬಹುದು. ಕಾರಣ, ಮಹಾಪುರುಷನೊಬ್ಬನನ್ನು ನಾವು ನಮ್ಮ ಸೀಮಿತ ಬುದ್ಧಿ, ಗ್ರಹಿಕೆಯ ಮೂಲಕ ಅರಿತುಕೊಳ್ಳುವ, ಅಳೆಯುವ ಪ್ರಯತ್ನ, ಹೆಳವನು ಪರ್ವತವೇರಲು ಹೊರಟಂತೆ. ಅಗಾಧ ಜ್ಞಾನರಾಶಿ, ಅತ್ಯುನ್ನತ ಆಧ್ಯಾತ್ಮಿಕ ಶಕ್ತಿ; ವಾಸ್ತವ ಪ್ರಪಂಚದ ಹಾಗೂ ಪ್ರಾಯೋಗಿಕ

ವಿಷಯಗಳ ದಟ್ಟ ಅನುಭವ; ಎಂಥ ನೀಚರೇ ಆಗಿರಲಿ, ಪಾಪಿಗಳಾಗಿರಲಿ ಅವರನ್ನು ಕಂಡು ಮರುಗುವ ವಿಶಾಲ ಹೃದಯ – ಇವೆಲ್ಲ ಒಬ್ಬ ವ್ಯಕ್ತಿಯಲ್ಲಿ ಮೇಳೈಸಿದ್ದನ್ನು ನಾವು ಬೇರೆಲ್ಲೂ ಕಾಣಲಾರೆವು. ಸ್ವಾಮಿ ವಿವೇಕಾನಂದರ ನಲವತ್ತು ವರ್ಷಗಳ ಜೀವಿತಾವಧಿಯಲ್ಲಿ ಇಡೀ ಮಾನವ ಇತಿಹಾಸದ ವಿಸ್ತಾರವನ್ನೂ, ಆಳ–ಅಗಾಧತೆಗಳನ್ನೂ, ಗಾಢ ಅನುಭವದ ಪ್ರೌಢತೆಯನ್ನೂ ನಾವು ಗಮನಿಸಬಹುದು. ಅವರ ಜೀವನವೇ ಒಂದು ಕೊನೆಯಿಲ್ಲದ ಮಹಾಕಾವ್ಯದಂತೆ, ನಿಲ್ಲದೆ ವಿಸ್ತಾರವಾಗುತ್ತ ಸಾಗುವ ಮಹಾನದಿಯಂತೆ. ಅವರ ಜೀವನದ ಒಂದೊಂದು ಘಟನೆಗಳೂ ಇತಿಹಾಸದ ಒಂದೊಂದು ಮೈಲಿಗಲ್ಲುಗಳಂತಿವೆ; ಅವುಗಳನ್ನು ಬಗೆದು ನೋಡಿದಷ್ಟೂ ಆಳ ಗೋಚರಿಸದೆ ಹೋಗುತ್ತವೆ; ಅನಂತದಲ್ಲಿ ಕರಗುತ್ತವೆ. ಸ್ವಾಮೀಜಿಯವರ ಕೃತಿಗಳೇ ಒಂದು ಮಹಾಸಾಗರದಂತೆ; ನಮಗೆ ದಕ್ಕುವುದು ನಮ್ಮ ಬೊಗಸೆ ಎಷ್ಟು ದೊಡ್ಡದೋ ಅಷ್ಟು ಮಾತ್ರ.

### ಅವರ ಭಾವನೆಗಳ ಪ್ರಾಯೋಗಿಕತೆ ಹಾಗೂ ಪ್ರಸ್ತುತೆ

ಸ್ವಾಮೀಜಿ ಆಲ್ಮೋರಾದ ಬಳಿ ಬಂದು ದಿವ್ಯದರ್ಶನವನ್ನು ಹೊಂದಿದರಂತೆ. ಆ ದರ್ಶನದ ಪ್ರಕಾರ, ವ್ಯಷ್ಟಿ ಮತ್ತು ಸಮಷ್ಟಿ ಎರಡೂ ಒಂದೇ ತತ್ತ್ವಕ್ಕೆ ಅನುಸಾರವಾಗಿ ನಿರ್ಮಿತವಾಗಿದೆ ಎಂಬುದನ್ನು ಅವರು ಕಂಡುಕೊಂಡರು. ಎಂಥ ಅದ್ಭುತವಾದ ದರ್ಶನ! ಭೌತಿಕ ಪ್ರಪಂಚ, ಸಮಸ್ತ ವಿಶ್ವ, ಮಾನಸಿಕ ಪ್ರಪಂಚ, ಆಧ್ಯಾತ್ಮಿಕ ಪ್ರಪಂಚ – ಇಡೀ ಅಸ್ತಿತ್ವವನ್ನೇ ಆವರಿಸುವ, ಅದೆಲ್ಲವನ್ನೂ ನಿಯಂತ್ರಿಸುವ ಸೂಕ್ಷ್ಮ ತತ್ತ್ವವಲ್ಲವೆ ಅದು? ತಾತ್ತ್ವಿಕವಾಗಿ ಅದು ದ್ವೈತ, ವಿಶಿಷ್ಟಾದ್ವೈತ, ಅದ್ವೈತ – ಇವು ಮೂರನ್ನು ಒಳಗೊಳ್ಳುವ ವೇದಾಂತದ ಸಾರಸರ್ವಸ್ವವೇ ಆಗಿ ಕಂಡುಬರುತ್ತದೆ; ವೈಜ್ಞಾನಿಕ ದೃಷ್ಟಿಯಿಂದ ನೋಡುವಾಗ ಪ್ರಪಂಚದ ಪ್ರತಿಯೊಂದು ವಸ್ತುವಿನಲ್ಲೂ , ಪ್ರತಿಯೊಂದು ಕ್ರಿಯೆಯಲ್ಲೂ ಕಂಡುಬರುವ ಮೂಲ ನಿಯಮವಾಗಿ ಕಾಣಿಸುತ್ತದೆ. ಇದರೊಂದಿಗೆ, ಅವ್ಯಕ್ತ ತತ್ತ್ವವೊಂದು ಹೇಗೆ ವಿಶ್ವವಾಗಿ ಪ್ರಕಟವಾಗಿದೆ ಎಂಬುದನ್ನು ತಿಳಿಸಿಕೊಡುವ ಸತ್ಯದ ಹೊಸ ದರ್ಶನವಾಗಿಯೂ ಇದು ಕಂಡುಬರುತ್ತದೆ. ಸ್ವಾಮೀಜಿ ಸಾರಿದ ಸಂದೇಶಗಳನ್ನೂ ಅವರು ಮಾಡಿದ ಕಾರ್ಯಗಳನ್ನೂ ಈ ದರ್ಶನದ ಹಿನ್ನೆಲೆಯಲ್ಲಿ ನಾವು ಗಮನಿಸಬೇಕು.

'ಅರಣ್ಯದಲ್ಲಿ ಅಡಗಿದ್ದ ಅದ್ವೈತ ಸಿದ್ಧಾಂತವನ್ನು ನಾನು ಬೀದಿ ಜನಸಾಮಾನ್ಯರ ಬಾಗಿಲಲ್ಲಿ ನಿಂತು ಎಲ್ಲರಿಗೂ ಬೋಧಿಸುತ್ತೇನೆ' ಎಂದರು ಸ್ವಾಮೀಜಿ. ಅದೇ ರೀತಿ ಅತ್ಯುಚ್ಚ ಆದರ್ಶಗಳನ್ನು ಜಾತಿ, ಕುಲ, ವರ್ಣ, ಜನಾಂಗ ಭೇದವಿಲ್ಲದೆ ಎಲ್ಲರಿಗೂ ಲಭ್ಯವಾಗುವಂತೆ ಮಾಡಲು ಅವರು ಕಾರ್ಯಪ್ರವೃತ್ತರಾದರು. ಈ ಹೊಸ ಬಗೆಯ ಕಾರ್ಯಕ್ಕೆ ಪ್ರೇರಕ ಮಂತ್ರವಾದ ಶ್ರೀರಾಮಕೃಷ್ಣರ 'ಶಿವಜ್ಞಾನೇ ಜೀವಸೇವಾ' ಎಂಬ ತತ್ತ್ವವೂ, 'ಜೀವೋ ಬ್ರಹ್ಮೈವ ನಾಪರಃ' ಎಂಬ ಅದ್ವೈತ ವೇದಾಂತದ ತತ್ತ್ವವೂ ಒಂದಲ್ಲ ಒಂದು ಬಗೆಯಲ್ಲಿ ಸ್ವಾಮೀಜಿ ಕಂಡ ವ್ಯಷ್ಟಿ–ಸಮಷ್ಟಿಯ ದರ್ಶನಕ್ಕೆ ಅನುಗುಣವಾಗಿಯೇ ಇದೆ. ಪರಬ್ರಹ್ಮನ ಅಂಶವೇ ಪ್ರತಿಯೊಂದು ಜೀವಿಯ ಅಂತರಂಗದಲ್ಲಿ ಅಡಗಿರುವ ಚೈತನ್ಯ; ಇದನ್ನು ವ್ಯಕ್ತಗೊಳಿಸುವುದೇ ಎಲ್ಲ ಆಧ್ಯಾತ್ಮಿಕ ಸಾಧನೆಗಳ ಗುರಿ; ಇದನ್ನು ಕಲಿಸುವ, ಕ್ರಮಿಸುವ ಮಾರ್ಗವೇ ಧರ್ಮ ಎಂದರು ಸ್ವಾಮೀಜಿ. ಅವರ ಎಲ್ಲ ಉಪದೇಶಗಳ, ಮಾತುಗಳ ಹಿಂದಿದ್ದ ಶಕ್ತಿಯೇ ಇದು – ದಿವ್ಯತತ್ತ್ವದ ಸಾಕ್ಷಾತ್ತಾದ ದರ್ಶನ; ಅಲೌಕಿಕ ಅನುಭವ.

### ಲೌಕಿಕ–ಅಲೌಕಿಗಳ ಸೇತುವೆ

ಸ್ವಾಮೀಜಿ ತಮ್ಮ ಭಾಷಣ, ಬರಹ ಹಾಗೂ ಮಾತುಕತೆಗಳಲ್ಲೆಲ್ಲ ಎಷ್ಟರಮಟ್ಟಿಗೆ ಸಾಧ್ಯವೋ ಅಷ್ಟರಮಟ್ಟಿಗೂ ಅಮೂರ್ತ, ಅವ್ಯಕ್ತ ಹಾಗೂ ಅಗ್ರಾಹ್ಯವೆನ್ನಿಸುವ ವಿವರಣೆಯನ್ನು ತಿರಸ್ಕರಿಸುತ್ತಿದ್ದರು. ಯಾವುದೇ ತತ್ತ್ವವಾಗಿರಲಿ, ಸತ್ಯವಾಗಿರಲಿ ಒಂದು ಹಂತ ದಾಟಿದ ಬಳಿಕ ಅವ್ಯಕ್ತವಾಗುವುದು; ಆದರೂ ಅದರ ವಿವರಣೆ ವ್ಯಕ್ತಗೊಂಡಾಗಲೇ(ಅಂದರೆ ಗ್ರಾಹ್ಯವೆಸುವ ಭಾಷೆಯಲ್ಲಿ ವಿವರಿಸಲ್ಪಟ್ಟಾಗಲೇ) ಅದರ ಸಂವಹನ ಸುಸ್ಪಷ್ಟವಾಗಿ ಸಾಧ್ಯವಾಗುವುದು ಎಂಬ ವಿಚಾರವನ್ನು ಸ್ವಾಮೀಜಿ ಅನೇಕ ಕಡೆ ವ್ಯಕ್ತಪಡಿಸುತ್ತಾರೆ. ಒಂದೆಡೆ ಅವರು, ಯಾವುದು ರಹಸ್ಯವೋ, ಮಾನವನ ಮನಸ್ಸಿಗೆ ಅಲಭ್ಯವೆಂದು ಹೇಳಲಾಗಿದೆಯೋ ಅದನ್ನೆಲ್ಲ ತ್ಯಜಿಸಬೇಕು ಎನ್ನುತ್ತಾರೆ. ಇದರರ್ಥ, ಎಲ್ಲ ಬಗೆಯ ಜ್ಞಾನಗಳೂ ಮಾನವನಿಗೆ ಸುಲಭವಾಗಿ ಲಭಿಸುವುವು ಎಂದಲ್ಲ ; ಪ್ರಯತ್ನ, ಸಾಧನೆಗಳ ಮೂಲಕ ಅನುಭವಗಮ್ಯವಲ್ಲದ ಎಲ್ಲ ರಹಸ್ಯಗಳನ್ನೂ ತ್ಯಜಿಸಿಬೇಕು ಎಂದಷ್ಟೇ. ಈ ಮೂಲಕ ಸ್ವಾಮೀಜಿ, ಅಲೌಕಿಕ ಜಗತ್ತಿನ ಸತ್ಯಗಳನ್ನು ಲೌಕಿಕ ಜೀವನಕ್ಕೆ ಎಳೆದು ತಂದು, ಮಾನವನ ನೇರ ಅನುಭವವನ್ನಾಗಿ ಮಾಡಿಕೊಳ್ಳಬೇಕು ಎಂದು ಸಾರಿದರು. ಧರ್ಮವೆಂದಿಗೂ ರಹಸ್ಯ ವಿದ್ಯೆಯಲ್ಲ; ಎಲ್ಲೋ ಕೆಲವು ಮಂದಿ ಮಾತ್ರ ಅದನ್ನು ಅರಿತುಕೊಳ್ಳಲು ಅರ್ಹರು ಎಂಬ ಪೂರ್ವಗ್ರಹಪೀಡಿತ ಹಕ್ಕುದಾರಿಕೆಯಲ್ಲ; ಅದು ಪ್ರತಿಯೊಬ್ಬ ಮಾನವನಿಗೂ ಲಭ್ಯವಾಗಬೇಕಾದ ವಿದ್ಯೆ, ಯಾರಿಗೆ ಅಗತ್ಯವೆನಿಸುವುದೋ ಅವರಿಗೆಲ್ಲ ಸಿಗಬೇಕಾದ ಜ್ಞಾನ. ಮಾನವನು ತನ್ನ ದಿವ್ಯ ಸ್ವಭಾವವನ್ನು ಅರಿತುಕೊಂಡಾಗಲೇ ಅವನು ಜೀವನದಲ್ಲಿ ಅರ್ಥವನ್ನು ಕಂಡುಕೊಳ್ಳುತ್ತಾನೆ, ಪರಿಪೂರ್ಣತೆಯತ್ತ ಮುನ್ನಡೆಯುತ್ತಾನೆ. ಇಲ್ಲಿ ಅಲೌಕಿಕ–ಪ್ರಾಪಂಚಿಕವೆಂಬ ಭೇದ ಇಲ್ಲದಾಗುವುದು; ಅರಿವಿನಿಂದ ಕೂಡಿದ ಆಧ್ಯಾತ್ಮಿಕತೆ ಜನಸಾಮಾನ್ಯರೆಲ್ಲರ ಸೊತ್ತಾಗುವುದು. ಪ್ರತಿಯೊಬ್ಬ ಮಾನವನು ಅನುಸರಿಬಹುದಾದ ಜೀವನಕ್ರಮವನ್ನು ಸ್ವಾಮೀಜಿ ಈ ಹಿನ್ನೆಲೆಯಲ್ಲೇ ಬೋಧಿಸಿದರು: ''ಯಾವುದನ್ನೇ ಆದರೂ ಪ್ರಾಮಾಣಿಕತೆಯಿಂದ ಮಾಡಿದರೆ ಅದೆಲ್ಲ ನಿಮಗೆ ಹಿತಕಾರಿ. ಅತ್ಯಂತ ಕನಿಷ್ಠವಾದುದನ್ನೂ ಚೆನ್ನಾಗಿ ಮಾಡಿದರೆ ಅದರಿಂದ ಅದ್ಭುತ ಫಲ ಪ್ರಾಪ್ತಿ . ಪ್ರತಿಯೊಬ್ಬರೂ ತಮಗೆ ಸಾಧ್ಯವಾದ ಮಟ್ಟಿಗೆ ಮಾಡಲಿ. ಬೆಸ್ತ ತಾನು ಆತ್ಮನೆಂದು ತಿಳಿದರೆ ಅವನು ಒಳ್ಳೆಯ ಬೆಸ್ತನಾಗುವನು. ವಿದ್ಯಾರ್ಥಿ ತಾನು ಆತ್ಮನೆಂದು ತಿಳಿದರೆ ಒಳ್ಳೆಯ ವಿದ್ಯಾರ್ಥಿಯಾಗುವನು. ವಕೀಲನು ತಾನು ಆತ್ಮನೆಂದು ತಿಳಿದರೆ ಆತ ಒಳ್ಳೆಯ ವಕೀಲನಾಗುವನು.'' *(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ. ೩, ಪು.೧೨೨)* ಜೀವನದಲ್ಲಿ ಪ್ರಾಯೋಗಿಕವಲ್ಲದ, ಅನುಷ್ಠಾನಕ್ಕೆ ಸಾಧ್ಯವಿಲ್ಲದ ತತ್ತ್ವದಿಂದ ಏನೂ ಪ್ರಯೋಜನವಿಲ್ಲವೆಂಬುದನ್ನು ಸ್ವಾಮೀಜಿ ಸ್ಪಷ್ಟವಾದ ಮಾತುಗಳಲ್ಲಿ ಹೇಳುತ್ತಾರೆ.

ಇದರರ್ಥ, ಆಧ್ಯಾತ್ಮಿಕ ತತ್ತ್ವ-ವಿಚಾರಗಳಿಲ್ಲದ ಪ್ರಾಪಂಚಿಕ ಬದುಕಿಗೆ ಸ್ವಾಮೀಜಿ ಒತ್ತು ನೀಡಿದ್ದರು ಎಂದಲ್ಲ. ಭಾರತೀಯ ಬದುಕಿನಲ್ಲಿ ಹಾಸುಹೊಕ್ಕಾಗಿರುವ ಆಧ್ಯಾತ್ಮಿಕತೆಯನ್ನು ಅವರು ಎಲ್ಲೆಡೆ ಎತ್ತಿ ಹಿಡಿದರು. ತಮ್ಮ ಪರಿವ್ರಾಜಕ ಜೀವನದ ಅವಧಿಯಲ್ಲಿ ಭಾರತದಾದ್ಯಂತ ಸಂಚರಿಸಿದ ಅವರು, ಇಲ್ಲಿನ ಜನಸಾಮಾನ್ಯರ ನೋವು-ನಲಿವುಗಳನ್ನೂ, ಬಡತನ-ಸಿರಿತನಗಳನ್ನೂ, ಧರ್ಮಕೇಂದ್ರಿತ ಸಾಮಾಜಿಕ ರೀತಿನೀತಿಗಳನ್ನೂ ನಿಕಟವಾಗಿ ಕಂಡರು. ಲೌಕಿಕ ಜೀವನದ ಸಮಸ್ಯೆಗಳು ಎಂಥವೇ ಆಗಿರಲಿ, ಭಾರತೀಯನೊಬ್ಬ ಪ್ರತಿಯೊಂದನ್ನೂ ಧರ್ಮಕ್ಕಾಗಿ ತ್ಯಜಿಸುವನು, ಆಧ್ಯಾತ್ಮಿಕತೆಗೆ ಎಲ್ಲಕ್ಕಿಂತ ಹೆಚ್ಚಿನ ಮೌಲ್ಯವನ್ನು ನೀಡುವನು ಎಂಬ ಅಂಶವನ್ನು ಸ್ವಾಮೀಜಿ ಪಾಶ್ಚಾತ್ಯ ಹಾಗೂ ಪೌರ್ವಾತ್ಯ ದೇಶಗಳಲ್ಲಿ ತಿಳಿಯಪಡಿಸಿದರು. ಪೌರ್ವಾತ್ಯ ದೇಶಗಳ ಆಧ್ಯಾತ್ಮಿಕತೆಯನ್ನು ಪಶ್ಚಿಮ ದೇಶಗಳಲ್ಲಿ ಹರಡುವುದು, ಅದೇರೀತಿ ಪಾಶ್ಚಾತ್ಯ ದೇಶಗಳು ವೈಜ್ಞಾನಿಕ-ಭೌತಿಕ ಕ್ಷೇತ್ರಗಳಲ್ಲಿ ಸಾಧಿಸಿದ ಪ್ರಗತಿಯನ್ನು ಪೌರ್ವಾತ್ಯ ದೇಶಗಳಲ್ಲಿ ಪಸರಿಸುವುದು – ಇದು ಸ್ವಾಮೀಜಿ ಬಯಸಿದ ಸಮನ್ವಯದ ಆಧುನಿಕ ಪ್ರಪಂಚ. ಹಳೆಯ-ಹೊಸ ಆದರ್ಶಗಳಿಗೂ, ಪೂರ್ವ-ಪಶ್ಚಿಮ ದೇಶಗಳ ದೃಷ್ಟಿಕೋನಗಳಿಗೂ ಇರುವ ವ್ಯತ್ಯಾಸವನ್ನರಿತು, ಅವೆರಡನ್ನೂ ಪರಸ್ಪರ ವಿನಿಮಯ ಮಾಡಿಕೊಂಡು, ಲೌಕಿಕ-ಆಧ್ಯಾತ್ಮಿಕ ಎರಡೂ ಕ್ಷೇತ್ರಗಳಲ್ಲಿ ಮುನ್ನಡೆಯುವುದು – ಇದೇ ಭವಿಷ್ಯದ ಜಾಗತಿಕ ಧರ್ಮವಾಗಬೇಕು ಎನ್ನುತ್ತಾರೆ ಸ್ವಾಮೀಜಿ. ಸಮಗ್ರ ಜಗತ್ತನ್ನು ಒಂದಾಗಿ ಕಾಣುವ, ಅಷ್ಟೇ ಅಲ್ಲದೆ ಲೌಕಿಕ-ಅಲೌಕಿಕ ಬದುಕನ್ನು ಒಂದಾಗಿ ಬೆಸೆಯುವ ಸ್ವಾಮೀಜಿಯವರ ಆದರ್ಶ ನಿಜವಾದ ಅರ್ಥದಲ್ಲಿ 'ಸರ್ವಸಮನ್ವಯ ಭಾವ'ದಿಂದ ಕೂಡಿದೆ; 'ಸಮದರ್ಶನ'ದ ವಿಶಾಲ ದೃಷ್ಟಿಯಾಗಿ ಕಂಡುಬರುತ್ತದೆ.

ಯಾರು ಇಹಲೋಕದ ಬಂಧನದಿಂದ ಪಾರುಮಾಡಿ, ಪರಮಾತ್ಮನ ದರ್ಶನ ಮಾಡಿಸುವನೋ ಅವನೇ ಗುರು; ಅವನೇ ಅಜ್ಞಾನದಲ್ಲಿ ತೊಳಲಾಡುತ್ತಿರುವ ಜೀವಿಯ ಪಾಲಿಗೆ ಇಹ-ಪರಗಳ ನಡುವಿನ ಸೇತುವೆ; ಸುರಕ್ಷಿತವಾಗಿ ಭವಸಾಗರವನ್ನು ದಾಟಿಸುವ ಭಗವಂತ. ಸ್ವಾಮಿ ವಿವೇಕಾನಂದರ ವೈವಿಧ್ಯಮಯ ವಿಚಾರಗಳು ಪ್ರಪಂಚದ ವಿವಿಧ ನೆಲೆಗಳಲ್ಲಿ, ವಿವಿಧ ಹಂತಗಳಲ್ಲಿ ವ್ಯಕ್ತಿಯನ್ನು ಆಧ್ಯಾತ್ಮಿಕ ನೆಲೆಗೇರಿಸುತ್ತವೆ. ಪ್ರಪಂಚಕ್ಕೆ ದಿವ್ಯತೆಯ ಅರಿವನ್ನು ನೀಡುತ್ತ ಹೋದರು ಸ್ವಾಮೀಜಿ. ಶ್ರೀರಾಮಕೃಷ್ಣರು ಸಾಕಷ್ಟು ಮೊದಲೇ 'ನರೇನ್ ಪ್ರಪಂಚಕ್ಕೆ ಅರಿವು ನೀಡುತ್ತಾನೆ' ಎಂದು ಭವಿಷ್ಯವಾಣಿ ನುಡಿದಿದ್ದರು. ಈ ಮಾತು ಸತ್ಯವಾಯಿತು; ಸ್ವಾಮೀಜಿ ಲೌಕಿಕ-ಅಲೌಕಿಕ ಜಗತ್ತುಗಳ ನಡುವಿನ ಸೇತುವೆಯಾದರು.

### ಜನನೀ ಜನ್ಮಭೂಮಿಶ್ಚ...

ಸ್ವಾಮೀಜಿ ದೃಷ್ಟಿ ಎಷ್ಟೇ ವ್ಯಾಪಕಗೊಳ್ಳಲಿ, ವಿಶ್ವವಿಶಾಲವಾಗಿರಲಿ ಅವರೆಂದೂ ಭಾರತವನ್ನು ಮರೆಯಲಿಲ್ಲ. ತಮ್ಮ ನಾಡು, ನುಡಿ, ಸಂಸ್ಕೃತಿಗಳು ಅವರಿಗೆ ಪರಮ ಪವಿತ್ರವಾಗಿತ್ತು. ಅವರು ಪಾಶ್ಚಾತ್ಯ ದೇಶಗಳಲ್ಲಿ ತಮ್ಮ ದಿಗ್ವಿಜಯದ ನಂತರ ಭಾರತಕ್ಕೆ ಮರಳಿದ ಸಂದರ್ಭ ಅತ್ಯಂತ ಹೃದಯಸ್ಪರ್ಶಿಯಾಗಿದೆ. ತಮ್ಮ ಪರಿವ್ರಾಜಕ ದಿನಗಲ್ಲೂ, ಮುಂದೆ ಅಮೆರಿಕಾ-ಇಂಗ್ಲೆಂಡ್ ದೇಶಗಳಲ್ಲಿ ಸ್ವಾಮೀಜಿ ಕೈಗೊಂಡ ಹಿಂದೂಧರ್ಮದ ಪ್ರಚಾರ ಕಾರ್ಯದ ನಡುವೆಯೂ, ಹಲವು ಬಗೆಯ ಸಂಕಟ, ಸುಖ-ವೈಭವದ ನಡುವೆಯೂ ಅವರು ತಮ್ಮ ಮಾತೃಭೂಮಿಯ ಉದ್ಧಾರ ಹೇಗೆ ಸಾಧ್ಯವಾದೀತು ಎಂದೇ ಚಿಂತಿಸುತ್ತಿದ್ದರು. ಪರಮತಸಹಿಷ್ಣುತೆ, ಅನ್ಯಭಾವನೆಗಳ ಸ್ವೀಕಾರ, ವಿಶ್ವವ್ಯಾಪಕವಾದ ಉದಾರಭಾವ – ಇವನ್ನೆಲ್ಲ ಸ್ವಾಮೀಜಿ ಬೋಧಿಸುತ್ತಿದ್ದರು; ಆದರೆ ಎಂದಿಗೂ ತಮ್ಮ ಧರ್ಮ, ದೇಶ, ನಾಡು, ನುಡಿಗಳನ್ನಾಗಲಿ ತಮ್ಮ ಸ್ವಾಭಿಮಾನವನ್ನಾಗಲಿ ಬಲಿಗೊಟ್ಟು ವಿಶ್ವವ್ಯಾಪಕತೆಯನ್ನು ಬೋಧಿಸುವ ಅಪ್ರಾಮಾಣಿಕ ಪ್ರವೃತ್ತಿ ಅವರದಾಗಿರಲಿಲ್ಲ. ತನ್ನ ನೆಲದಲ್ಲಿ, ತನ್ನ ನೆಲೆಯಲ್ಲಿ, ನಿಂತು ಜಗತ್ತನ್ನೆಲ್ಲ ವ್ಯಾಪಿಸುವ ಅಪ್ಪಟ ದೇಶಭಕ್ತನ ಪ್ರವೃತ್ತಿ ಅವರದು. ಪಾಶ್ಚಾತ್ಯ ಜನಜೀವನ, ಸಮಾಜದ ಅನೇಕ ಸುಧಾರಣೆಗಳನ್ನು ಅವರು ಮೆಚ್ಚಿಕೊಂಡಿದ್ದರೂ, ಅಲ್ಲಿನ ಜನ ಎಂದಾದರೂ ಭಾರತೀಯರನ್ನಾಗಲಿ, ಅವರ ಧರ್ಮ ಸಂಸ್ಕೃತಿ, ಸಮಾಜವನ್ನಾಗಲಿ ಟೀಕಿಸಿದರೆ ಸ್ವಾಮೀಜಿ ಸಹಿಸುತ್ತಿರಲಿಲ್ಲ; ಸಿಡಿದೆದ್ದು ನಿಂತು ಸೂಕ್ತ ಉತ್ತರ ನೀಡುತ್ತಿದ್ದರು. ಪಾಶ್ಚಾತ್ಯ ದೇಶಗಳ ದಿಗ್ವಿಜಯದ ನಂತರ ಭಾರತಕ್ಕೆ ಮರಳಿ ಬರುವ ಸಂದರ್ಭದಲ್ಲಿ ಒಬ್ಬ ಕ್ರೈಸ್ತ ಮಿಷನರಿ ಸ್ವಾಮೀಜಿ ಮುಂದೆ ಹಿಂದೂಧರ್ಮವನ್ನು ಅತ್ಯಂತ ಹೀನಾಯವಾಗಿ ನಿಂದಿಸತೊಡಗಿದ. ಮೊದಮೊದಲು ಶಾಂತರಾಗಿದ್ದ ಸ್ವಾಮೀಜಿ, ಕೊನೆಗೆ ಅವನ ಕೊರಳ ಪಟ್ಟಿಯನ್ನು ಬಲವಾಗಿ ಹಿಡಿದು, ''ನೀನು ಇನ್ನೂ ನನ್ನ ಧರ್ಮವನ್ನು ನಿಂದಿಸಿದರೆ ನಿನ್ನನ್ನು ಸಮುದ್ರಕ್ಕೆ ಎಸೆದು ಬಿಡುತ್ತೇನೆ'' ಎಂದರು. ಭಯಭೀತನಾದ ಆ ಪಾದ್ರಿ ಅನಂತರ ಅವರೊಂದಿಗೆ ವಿನೀತನಾಗಿ ವರ್ತಿಸಿದನಂತೆ. ವಿಶಾಲಭಾವವೆಂದರೆ ತನ್ನನ್ನು ತಾನು ಮಾರಿಕೊಂಡ ದಾಸ್ಯಭಾವವಲ್ಲ ಎಂಬುದನ್ನು ಸ್ವಾಮೀಜಿ ಹಲವು ಸಂದರ್ಭಗಳಲ್ಲಿ ತೋರಿಸಿಕೊಡುತ್ತಾರೆ.

### ಸನಾತನ ತತ್ತ್ವಕ್ಕೆ ಹೊಸ ಭಾಷ್ಯ

ಸ್ವಾಮೀಜಿ ಹೊಸ ತತ್ತ್ವವನ್ನು ಬೋಧಿಸಲಿಲ್ಲ; ಹೊಸ ಧರ್ಮ, ವಿಚಾರಗಳನ್ನು ಆರಂಭಿಸಲಿಲ್ಲ. ಸನಾತನ ಧರ್ಮ, ಸಂಸ್ಕೃತಿಯ ಹರಿಕಾರರಾಗಿ, ಅದರ ಶ್ರೇಷ್ಠ ಪ್ರತಿನಿಧಿಯಾಗಿ ಪ್ರಪಂಚವನ್ನು ವ್ಯಾಪಿಸಿ ನಿಂತರು. ಪ್ರಯೋಜನಶೂನ್ಯವಾದ, ಕಾಲ-ದೇಶಬದ್ಧವಾದ ನೀತಿನಿಯಮಗಳಿಂದ ಜಡಗಟ್ಟಿದ ಧಾರ್ಮಿಕ ನಡವಳಿಕೆಗಳಿಗೂ, ಸಾರ್ವತ್ರಿಕವೂ ಸಾರ್ವಕಾಲಿಕವೂ ಆದ ಸನಾತನ ತತ್ತ್ವಗಳಿಗೂ ಇರುವ ವ್ಯತ್ಯಾಸವನ್ನು ಸ್ಪಷ್ಟವಾದ ಮಾತುಗಳಲ್ಲಿ ತಿಳಿಯಪಡಿಸಿ, ನಿಜವಾದ ಆಧ್ಯಾತ್ಮಿಕತೆಯ, ನಿಜವಾದ ಧರ್ಮದ ತಿರುಳನ್ನು ಹೊಸ ಬಗೆಯಲ್ಲಿ ಪ್ರಸ್ತುತಪಡಿಸಿದುದೇ ಸ್ವಾಮೀಜಿ ಜಗತ್ತಿಗೆ ನೀಡಿದ ಅತ್ಯಮೂಲ್ಯ ಕೊಡುಗೆ. 'ಸ್ವಾಮೀಜಿ ಜಗತ್ತಿಗೆ ಏನೇನನ್ನು ನೀಡಿದರು?' ಎಂದು ಕೇಳುವುದಕ್ಕೆ ಬದಲಾಗಿ, 'ಅವರು ಜಗತ್ತಿಗೆ ನೀಡದೆ ಉಳಿದದ್ದೇನು?' ಎಂದು ಕೇಳಬೇಕು. ಅವರ ಅನುಕಂಪೆಯ ವಿಶಾಲ ಹೃದಯ ಸಮಸ್ತ ಮಾನವಕೋಟಿಯನ್ನಷ್ಟೇ ಅಲ್ಲ ; ನಮ್ಮ ಊಹೆಯ ಪರಿಧಿಯನ್ನೂ ಮೀರಿ ಇನ್ನೂ ಎಷ್ಟೋ ದೂರ ವ್ಯಾಪಿಸಿತ್ತು. ''ಇನ್ನೊಬ್ಬ ವಿವೇಕಾನಂದ ಇದ್ದಿದ್ದರೆ ಈ ವಿವೇಕಾನಂದನನ್ನು ಅರ್ಥಮಾಡಿಕೊಳ್ಳುತ್ತಿದ್ದ'' ಎಂದಿದ್ದರು ಸ್ವಾಮೀಜಿ. ಈ ಮಾತು ಅರ್ಥಗರ್ಭಿತವಾಗಿದೆ! *

# ದೃಢ ವಿಶ್ವಾಸ



❀ ಒಂದರಲ್ಲಿ ದೃಢವಿಶ್ವಾಸವುಳ್ಳವರಾಗಿರಿ – ಸಾಕಾರದಲ್ಲಿ ಇಲ್ಲದಿದ್ದರೆ ನಿರಾಕಾರದಲ್ಲಿ. ಆಗ ಮಾತ್ರ ಭಗವಂತನ ಸಾಕ್ಷಾತ್ಕಾರ ದೊರೆಯುತ್ತದೆ; ಇಲ್ಲದೆ ಇದ್ದರೆ ದೊರೆಯದು, ದೃಢತೆಯೊಂದಿದ್ದರೆ ಸಾಕಾರವಾದಿಗೂ ಭಗವಂತನ ಸಾಕ್ಷಾತ್ಕಾರ ದೊರೆಯುತ್ತದೆ, ನಿರಾಕಾರವಾದಿಗೂ ದೊರೆಯುತ್ತದೆ. ಕಜ್ಜಾಯವನ್ನು ನೆಟ್ಟನೆಟ್ಟಗೆ ಕಡಿದು ತಿನ್ನಿ, ಹೇಗೇ ತಿಂದರೂ ಸಿಹಿಯಾಗಿ ಇರುತ್ತದೆ.

❀ ಆದರೆ ದೃಢ ವಿಶ್ವಾಸ ಉಳ್ಳವರಾಗಿರಬೇಕು; ವ್ಯಾಕುಲರಾಗಿ ಆತನನ್ನು ಕರೆಯಬೇಕು. ಪ್ರಾಪಂಚಿಕ ದೃಷ್ಟಿಯ ಭಗವಂತ ಎಂಥವನು ಎಂಬುದು ಗೊತ್ತೆ? ಮಕ್ಕಳು ಚಿಕ್ಕಮ್ಮ ದೊಡ್ಡಮ್ಮನ ಜಗಳ ಕೇಳಿಕೊಂಡಿದ್ದು ತಾವು ಆಟವಾಡುವಾಗ ಪರಸ್ಪರ, 'ದೇವರ ಆಣೆಯಾಗಿಯೂ' ಎಂಬುದಾಗಿ ಹೇಳುತ್ತವೆ. ಇವರದೂ ಮಕ್ಕಳ ಭಗವಂತನ ಹಾಗೆ, ಅಥವಾ ಇದು ಒಬ್ಬ ಷೋಕಿಲಾಲ ಎಲೆಯಡಿಕೆ ಅಗಿಯುತ್ತ ಅಗಿಯುತ್ತ ಕೈಯಲ್ಲಿ ಬೆತ್ತ ಹಿಡಿದು ಪಾರ್ಕಿನಲ್ಲಿ ನಡೆಯುತ್ತ ನಡೆಯುತ್ತ ಒಂದು ಹೂವನ್ನು ಕಿತ್ತುಕೊಂಡು ತನ್ನ ಬಂಧುವಿಗೆ, 'ಆಹ! ಭಗವಂತ ಎಷ್ಟು ಬ್ಯೂಟಿಫುಲ್ (ಸುಂದರವಾದ) ಹೂವನ್ನು ಸೃಷ್ಟಿಸಿದ್ದಾನೆ!' ಎಂಬುದಾಗಿ ಹೇಳುವಾಗ ಭಗವಂತ ಎಂಬ ಪದವನ್ನು ಉಪಯೋಗಿಸಿದ ಹಾಗೆ. ಆದರೆ ಈ ಪ್ರಾಪಂಚಿಕರ ಭಗವಂತನ ಭಾವನೆ ಬಹಳ ಕ್ಷಣಿಕವಾದದ್ದು, ಕಾದ ಬಾಣಲೆಯ ಮೇಲೆ ಬಿದ್ದ ಹನಿಯ ಹಾಗೆ.

❀ ಒಂದರ ಮೇಲೆ ದೃಢ ವಿಶ್ವಾಸವುಳ್ಳವರಾಗಿ ಇರಬೇಕು. ಆಳಕ್ಕೆ ಮುಳುಗಿ, ಹಾಗೆ ಮಾಡದಿದ್ದರೆ ಸಮುದ್ರದೊಳಗಿನ ಮುತ್ತುಗಳನ್ನು ಪಡೆಯಲಾಗುವುದಿಲ್ಲ. ನೀರಿನ ಮೇಲೆಯೆ ಕೇವಲ ತೇಲುತ್ತಿದ್ದರೆ ಪಡೆಯಲಾಗುವುದಿಲ್ಲ.

❀ ಮನುಷ್ಯ ಭಗವಚ್ಚಿಂತನೆಯನ್ನೇನೋ ಮಾಡುತ್ತಾನೆ, ಆದರೆ ಆತನ ಇರುವಿಕೆಯಲ್ಲಿ ಆತನಿಗೆ ವಿಶ್ವಾಸವಿಲ್ಲ; ಮತ್ತೆ ಮತ್ತೆ ಭಗವಂತನನ್ನು ಮರೆಯುತ್ತಾನೆ, ಮತ್ತೆ ಸಂಸಾರದಲ್ಲಿ ಆಸಕ್ತನಾಗುತ್ತಾನೆ. ಇದು ಆನೆಗೆ ಮೈ ತೊಳೆದ ಹಾಗೆ; ಅದು ಮತ್ತೆ ಧೂಳು ಮತ್ತು ಬೂದಿಯನ್ನು ಮೈಗೆ ಮೆತ್ತಿಕೊಂಡು ಬಿಡುತ್ತದೆ. 'ಮನಸ್ಸೆಂಬುದು ಒಂದು ಮದಿಸಿದ ಆನೆ.' ಆದರೆ ಆನೆಗೆ ಮೈ ತೊಳೆದ ಒಡನೆಯೆ ಅದನ್ನು ತೆಗೆದುಕೊಂಡು ಲಾಯದಲ್ಲಿ ಕಟ್ಟಿಹಾಕಿದರೆ ಅದು ಮತ್ತೆ ಧೂಳು ಮತ್ತು ಬೂದಿಯನ್ನು ಮೈಗೆ ಬಳಿದುಕೊಳ್ಳಲಾರದು. ಮನುಷ್ಯ ಮೃತ್ಯುಶಯ್ಯೆಯಲ್ಲಿ ಭಗವಂತನ ಚಿಂತನೆ ಮಾಡಿದರೆ ಆತನ ಮನಸ್ಸು ಶುದ್ಧವಾಗುತ್ತದೆ. ಬಳಿಕ ಆ ಮನಸ್ಸಿಗೆ ಮತ್ತೆ ಕಾಮಕಾಂಚನದಲ್ಲಿ ಆಸಕ್ತವಾಗಲು ಅವಕಾಶ ದೊರೆಯದು.

❀ ಮನುಷ್ಯನಿಗೆ ಭಗವಂತನಲ್ಲಿ ವಿಶ್ವಾಸವಿಲ್ಲ; ಅದಕ್ಕಾಗಿಯೇ ಆತ ಅಷ್ಟೊಂದು ದುಃಖವನ್ನು ಅನುಭವಿಸುವುದು. ಜನ ಹೇಳುತ್ತಾರೆ, 'ಗಂಗಾಸ್ನಾನದ ಸಮಯದಲ್ಲಿ ಜನರ ಪಾಪಗಳೆಲ್ಲ ಅವರವರನ್ನು ಬಿಟ್ಟು ಗಂಗೆಯ ತೀರದಲ್ಲಿರುವ ಗಿಡಗಳ ಮೇಲೆ ಕುಳಿತುಕೊಂಡಿರುತ್ತವೆ. ಸ್ನಾನ ಮುಗಿಸಿ ದಡಕ್ಕೆ ಬರುವುದೇ ತಡ ಒಡನೆಯೆ ಅವು ನೆಗೆದು ಅವರವರ ಹೆಗಲನ್ನು ಹತ್ತಿಬಿಡುತ್ತವೆ' ಎಂದು. ದೇಹತ್ಯಾಗದ ಸಮಯದಲ್ಲಿ ಭಗವಂತನ ಚಿಂತನೆ ಬರಬೇಕಾದರೆ, ಬದುಕಿರುವಾಗಲೆ ಅದಕ್ಕೆ ತಕ್ಕ ಸಿದ್ಧತೆಗಳನ್ನು ಮಾಡಿಕೊಳ್ಳಬೇಕು. ಸಿದ್ಧತೆ – ಅಭ್ಯಾಸಯೋಗ, ಭಗವಚ್ಚಿಂತನೆಯ ಅಭ್ಯಾಸವನ್ನು ಮಾಡಿದ್ದರೆ ಜೀವನದ ಕೊನೆಯ ದಿನವೂ ಆತನ ಭಾವನೆ ಮನಸ್ಸಿನಲ್ಲಿ ಏಳುತ್ತದೆ.

❀ ಒಳ್ಳೆಯ ದೃಢಸಂಕಲ್ಪವಿಲ್ಲದಿದ್ದರೆ ಯಾವ ರೀತಿಯಾಗಿ ರೈತ ತನ್ನ ಜಮೀನಿಗೆ ನೀರು ತರಲಾರನೋ ಹಾಗೆಯೇ ತೀವ್ರ ವೈರಾಗ್ಯವಿಲ್ಲದಿದ್ದರೆ ಮನುಷ್ಯ ಭಗವಂತನ ಸಾಕ್ಷಾತ್ಕಾರವನ್ನು ಪಡೆದುಕೊಳ್ಳಲಾರ.

❀ ನಿಮಗೆ ನಿರಾಕಾರದಲ್ಲಿ ವಿಶ್ವಾಸವಿರುವುದಾದರೆ ಅದನ್ನೇ ದೃಢವಾಗಿ ಹಿಡಿದುಕೊಳ್ಳಿ. ಆದರೆ ಮಾತ್ರ ಸ್ವಮತಭ್ರಾಂತರಾಗಬೇಡಿ. ಆತನ ಸಂಬಂಧವಾಗಿ ಒತ್ತಿ ಹೇಳಬೇಡಿ, 'ಆತ ಇದಾಗಬಲ್ಲ, ಅದು ಆಗಲಾರ.' ಅದಕ್ಕೆ ಬದಲು 'ನನ್ನ ವಿಶ್ವಾಸ ಆತ ನಿರಾಕಾರ ಅಂತ; ಆತ ಇನ್ನೇನು ಆಗಬಲ್ಲನೋ ಅದು ಆತನಿಗೆ ಗೊತ್ತು. ಅದು ನನಗೆ ಗೊತ್ತಿಲ್ಲ; ತಿಳಿದುಕೊಳ್ಳಲಾಗುತ್ತಿಲ್ಲ' ಎಂದು ಹೇಳಿ. ಮನುಷ್ಯ ಒಂದು ಚಟಾಕು ಬುದ್ಧಿಯಿಂದ ಭಗವಂತನ ಸ್ವರೂಪವನ್ನು ಅರಿಯಲು ಸಾಧ್ಯವೆ? ಒಂದು ಸೇರಿನ ಗಡಿಗೆ ನಾಲ್ಕು ಸೇರು ಹಾಲನ್ನು ಹಿಡಿಸುವುದೆ? ಆತ ಕೃಪೆಮಾಡಿ ಯಾವಾಗಲಾದರೂ ದರ್ಶನ ಕೊಡುವುದಾದರೆ ಮತ್ತು ತಿಳಿಸಿಕೊಡುವುದಾದರೆ ಆಗ ಅರಿತುಕೊಳ್ಳಲು ಸಾಧ್ಯ; ಇಲ್ಲದೆ ಇದ್ದರೆ ಸಾಧ್ಯವೇ ಇಲ್ಲ.

❀ ಸರಳನಲ್ಲದವನಿಗೆ ಅಷ್ಟು ಬೇಗ ಭಗವಂತನಲ್ಲಿ ವಿಶ್ವಾಸ ಹುಟ್ಟದು. ವಿಷಯಾಸಕ್ತರಿಂದ ಬಹಳ ದೂರದಲ್ಲೇ ಭಗವಂತ ನಿಲ್ಲುತ್ತಾನೆ. ವಿಷಯಬುದ್ಧಿ ಇತ್ತು ಎಂದರೆ ಹೃದಯದಲ್ಲಿ ಸಂಶಯ ಮನೆ ಮಾಡಿಕೊಳ್ಳುತ್ತದೆ ಮತ್ತು ನಾನಾವಿಧದ ಅಹಂಕಾರಗಳು – ಪಾಂಡಿತ್ಯದ ಅಹಂಕಾರ, ಧನದ ಅಹಂಕಾರ ಇವೇ ಮೊದಲಾದವು ಬಂದುಬಿಡುತ್ತವೆ.

❀ ಭಗವಂತ ನಿರಾಕಾರ ಎಂಬ ವಿಶ್ವಾಸವಿದ್ದರೂ ಆತನ ಸಾಕ್ಷಾತ್ಕಾರ ದೊರೆಯುತ್ತದೆ, ಸಾಕಾರ ಎಂಬ ವಿಶ್ವಾಸವಿದ್ದರೂ ಆತನ ಸಾಕ್ಷಾತ್ಕಾರ ದೊರೆಯುತ್ತದೆ. ಆತನ ಸಾಕ್ಷಾತ್ಕಾರಕ್ಕೆ ಆತನಲ್ಲಿ ವಿಶ್ವಾಸವಿರುವುದು ಮತ್ತು ಆತನಿಗೆ ಶರಣಾಗತನಾಗುವುದು ಇವೆರಡೂ ಆವಶ್ಯಕ.

ಶ್ರೀರಾಮಕೃಷ್ಣ ವಚನವೇದದಿಂದ

# ಸ್ವಾಮಿ ವಿವೇಕಾನಂದರ ಪತ್ರಜಗತ್ತು

**ಡಾ. ಡಿ.ಕೆ.ರಾಜೇಂದ್ರ**

ಸ್ವಾಮಿ ವಿವೇಕಾನಂದರ ಪತ್ರಗಳಲ್ಲಿ ತೋರಿ ಬರುವ ಅವರ ವ್ಯಕ್ತಿತ್ವ, ಮಡುಗಟ್ಟಿದ ಭಾವನೆಗಳು, ಅವರ ಅನುಭವಗಳ ವಿಶಾಲ ಪ್ರಪಂಚ, ತತ್ತ್ವ-ಆದರ್ಶಗಳ ಆಳ, ಎತ್ತರ ಅನ್ಯಾದೃಶ. ಈ ಪತ್ರಗಳ ಓದು ಎಂಥವರನ್ನೂ ಕಲಕುವಂಥದು. ಈ ಕುರಿತು ವಿಶ್ಲೇಷಿಸಿರುವ ಲೇಖಕರು ಕನ್ನಡದ ಹಿರಿಯ ವಿದ್ವಾಂಸರು ಹಾಗೂ ಲೇಖಕರು; ಅವರು ಸ್ವಾಮೀಜಿ ಕೃತಿಗಳನ್ನು ಆಳವಾಗಿ ಅಧ್ಯಯನ ಮಾಡಿದ್ದಾರೆ.



**ಸ್ವಾ**ಮಿ ವಿವೇಕಾನಂದರ ದಿವ್ಯ ಚೇತನ ಹಲವು ರೂಪಗಳಲ್ಲಿ ಈ ಜಗತ್ತನ್ನು ವ್ಯಾಪಿಸಿದೆ. ಅಷ್ಟೇ ಅಲ್ಲ ಜಗಜ್ಜ್ಯೋತಿಯಾಗಿ ಬೆಳಗಿದೆ. ಆ ಜ್ಯೋತಿಯ ಕಿರಣಗಳು ನಾನಾ ರೂಪಗಳಲ್ಲಿ ಮನೆ-ಮನಗಳನ್ನು ಹೊಕ್ಕು ವಿವೇಕ ಜ್ಯೋತಿಯಾಗಿ ಕಂಗೊಳಿಸಿವೆ. ವಿವೇಕಾನಂದರು ಅದ್ಭುತ ವಾಕ್ಚಾತುರ್ಯವುಳ್ಳ ಭಾಷಣಕಾರರೆಂತೋ, ಅಷ್ಟೇ ಅದ್ಭುತ ಶಕ್ತಿಶಾಲಿಯಾದ ಬರಹಗಾರರೂ ಹೌದು. ಅವರ ಭಾಷಣ ಕಲೆ ಹಾಗೂ ಬರಹ ಕಲೆಗಳೆರಡೂ ವಿಚಾರಶಕ್ತಿಯಿಂದ ಪ್ರಚೋದಿತವಾಗಿ ಇಡೀ ವಿಶ್ವವನ್ನೇ ನಿಬ್ಬೆರಗುಗೊಳಿಸಿದ್ದು ಮರೆಯಲಾಗದ ಸಂಗತಿ. ''ಮೊದಲು ನಾನು ನನ್ನ ತಾಯ್ನಾಡನ್ನು ಪ್ರೀತಿಸುತ್ತಿದ್ದೆ. ಆದರೆ ವಿವೇಕಾನಂದರ ಜೀವನ ಸಂದೇಶಗಳನ್ನೋದಿದ ನಂತರ ನನ್ನ ರಾಷ್ಟ್ರ ಪ್ರೇಮ ಸಾವಿರಮಡಿ ಹೆಚ್ಚಾಯಿತು'' ಎನ್ನುತ್ತಾರೆ, ರಾಷ್ಟ್ರಪಿತ ಮಹಾತ್ಮಾ ಗಾಂಧಿ.

ಸ್ವಾಮಿ ವಿವೇಕಾನಂದರ ವಿಚಾರಧಾರೆ, ಅದು ಬತ್ತದ ಜ್ಞಾನ ಧಾರೆ. ಆಲೋಚಿಸಿದಷ್ಟೂ ನಮ್ಮನ್ನು ಆ ಕುರಿತ ಚಿಂತನೆಗೆ ಒಳಗು ಮಾಡುವ, ಹೆಚ್ಚು ಹೆಚ್ಚು ಧೈರ್ಯ ತುಂಬಿ ಮುನ್ನುಗ್ಗಲು ಉತ್ತೇಜಿಸುವ ಶಕ್ತಿಯ ಕಿಡಿಗಳು. ವಿವೇಕಾನಂದರು ಇಂತಹ ಒಂದು ಜ್ಞಾನ ಹಾಗೂ ವಿಚಾರಗಳನ್ನು ಪ್ರಪಂಚಕ್ಕೆ ಹರಡತೊಡಗಿದ್ದು ಒಂದು ಸಂದಿಗ್ಧ ಪರಿಸ್ಥಿತಿಯಲ್ಲಿ. ಎಲ್ಲೆಲ್ಲಿಯೂ ಸಂಕುಚಿತ ಮನೋಭಾವ ತುಂಬಿ ತುಳುಕುತ್ತಿದ್ದ ಸಂದರ್ಭದಲ್ಲಿ. ಹೊರಗಿನವರ ದೃಷ್ಟಿಯಲ್ಲಿ ಭಾರತವನ್ನು ಕೀಳಾಗಿ ಕಾಣುತ್ತಿದ್ದ ಸಂದರ್ಭದಲ್ಲಿ. ಭಾರತೀಯರಲ್ಲಿ ರಾಷ್ಟ್ರಪ್ರೇಮ, ರಾಷ್ಟ್ರಭಕ್ತಿ ಹೆಚ್ಚುವಂತೆ ಮಾಡಿ ಆತ್ಮಸ್ಥೈರ್ಯವನ್ನು ತಮ್ಮ ಕೆಚ್ಚೆದೆಯ ವಾಣಿಯಿಂದ ಹೆಚ್ಚುವಂತೆ ಮಾಡಿದರು. ತಮ್ಮಲ್ಲಿದ್ದ ಕೀಳರಿಮೆಯನ್ನು ತೊಡೆದು ಹಾಕಿ ತಲೆ ಎತ್ತಿ ನಿಲ್ಲುವಂತೆ ಮಾಡಲು ಅವರ ವಾಣಿ ಸಹಕಾರಿಯಾಯಿತು. ಇದೆಲ್ಲವೂ ಅವರ ವಾಣಿಯಿಂದ ಮತ್ತು ಬರಹಗಳ ಮೂಲಕ ಸಾಧ್ಯವಾಯಿತೆಂಬುದು ವಿಶೇಷ. ಇದರಲ್ಲಿ ಅವರ ಪತ್ರಗಳ ಮಹತ್ವವೇ ಹೆಚ್ಚಿನದು.

ಪತ್ರ ಬರೆಯುವುದೂ ಒಂದು ಕಲೆ. ಕಲಾತ್ಮಕವಾಗಿದ್ದಷ್ಟು ಅದು ನಮ್ಮ ಮನಸ್ಸನ್ನು ಸೆಳೆದು ಉಲ್ಲಾಸಗೊಳಿಸುತ್ತದೆ ಎಂಬುದು ನಿಜ. ಆದರೆ ಮಹಾತ್ಮರೆನಿಸಿದವರ, ವಿಚಾರವಂತರ, ಮಹತ್ಕಾರ್ಯಕ್ಕೆ ಮುಡುಪಾಗಿಸಿಕೊಂಡವರ ಅಂತರಂಗದಿಂದ ಬರುವ ಹೃನ್ಮನದ ನುಡಿಗಳು ಅಷ್ಟಕ್ಕೇ ಸೀಮಿತಗೊಳ್ಳದೆ ಚೈತನ್ಯದ ಚಿಲುಮೆಯಾಗಿ ಇಡೀ ವಿಶ್ವವನ್ನೇ ಬೆಳಗುವ ಜ್ಯೋತಿಯಾಗುತ್ತವೆ. ಸ್ವಾಮಿ ವಿವೇಕಾನಂದರ ಮಾತಾಗಲಿ, ಕೃತಿಯಾಗಲಿ ಈ ವರ್ಗಕ್ಕೆ ಸೇರಿದ್ದು. 'Letters of Swami Vivekananda' ಈ ದೃಷ್ಟಿಯಿಂದ ಮಹತ್ವದ ಕೃತಿ. ಅದು ಕೇವಲ ಕೃತಿಯಲ್ಲ ಇಡೀ ವಿಶ್ವಕ್ಕೆ ನೀಡಿದ 'ಜ್ಞಾನಜ್ಯೋತಿ', 'ವಿವೇಕ ಜ್ಯೋತಿ.' ಅದರಲ್ಲಿ ಏನಿದೆ ? ಏನಿಲ್ಲ ? ಎಲ್ಲವೂ ಇದೆ. 'ಪತ್ರ ಸಾಹಿತ್ಯ'ದ ಸಾಲಿನಲ್ಲಿ ಅದೊಂದು ಅನರ್ಘ್ಯ ರತ್ನ. ಇದರಲ್ಲಿ ಸಾಮಾನ್ಯ ಸಂಗತಿಯಿಂದ ಅಸಮಾನ್ಯ ಸಂಗತಿಗಳ ವರೆಗಿನ ಎಲ್ಲ ವಿಷಯಗಳು ಇಡಿಕಿರಿದು ತುಂಬಿವೆ. ಹಾಗೆಯೇ ಶಿಷ್ಯರಿಗೆ ಬರೆದ ಪತ್ರಗಳಿಂದ ಹಿಡಿದು, ರಾಷ್ಟ್ರದ ಹಲವು ಗಣ್ಯರಿಗೆ, ವಿಶ್ವದ ಹಲವು ಅನುಯಾಯಿಗಳಿಗೆ ಬರೆದ ಪತ್ರಗಳೂ ಸಂಚಯಗೊಂಡಿವೆ.

ಈ ವ್ಯಾಪ್ತಿಯಲ್ಲಿ ಬರುವ ಒಂದೊಂದು ಪತ್ರದ ಸಾರವೂ ವೈವಿಧ್ಯಮಯವಾದದ್ದು, ಅಷ್ಟೇ ಮಹತ್ವಪೂರ್ಣವಾದದ್ದು. ಅದು ಆಧ್ಯಾತ್ಮಿಕ ಲೋಕವನ್ನು ಒಳಗೊಂಡಂತೆಯೆ ಯುವಕರನ್ನು ಹುರಿದುಂಬಿಸುವ, ವಿಶ್ವಧರ್ಮವನ್ನು ಸಾರುವ, ರಾಷ್ಟ್ರಪ್ರೇಮವನ್ನು ಹೆಚ್ಚಿಸುವ, ತಾಯ್ನಾಡನ್ನು ಪ್ರೀತಿಸಿ ಗೌರವಿಸುವ, ಅಷ್ಟೇ ಏಕೆ, ಮಾನವ ಪ್ರೀತಿಯನ್ನು ವೃದ್ಧಿಸಿ, ದೀನದಲಿತರ ಬಗ್ಗೆ ಕನಿಕರ ತೋರಿ ಅವರನ್ನು

ಉದ್ಧರಿಸುವ ಮನೋಭಾವವನ್ನು ಇಮ್ಮಡಿ ಮುಮ್ಮಡಿಗೊಳಿಸುವ ಎಲ್ಲ ತರಹದ ವಿಷಯಗಳನ್ನು ಪ್ರಭಾವಶಾಲಿಯಾಗಿ ಗರ್ಭೀಕರಿಸಿ ಕೊಂಡವುಗಳು. ಒಂದೊಂದು ಪತ್ರವೂ ಶಾಸನ ರೂಪದಲ್ಲಿ ನಮ್ಮೆದುರು ನಿಂತು, ಇಚ್ಛಾಶಕ್ತಿಯನ್ನು ಬಲಗೊಳಿಸಿ, ಮುನ್ನುಗ್ಗುವ ಮನೋಭಾವವನ್ನು, ಕೆಚ್ಚೆದೆಯ ಕಲಿಗಳನ್ನಾಗಿಸುವ ಶಕ್ತಿಯನ್ನು ತುಂಬುತ್ತವೆ. ಈ ದೃಷ್ಟಿಯಿಂದಲೇ ಜವಾಹರ್‌ಲಾಲ್ ನೆಹರು ಅವರು ಸ್ವಾಮಿ ವಿವೇಕಾನಂದರನ್ನು ಕುರಿತು ಹೀಗೆ ಹೇಳಿದ್ದಾರೆ: ''ಭಾರತದ ಯುವಜನತೆಗೆ ಏಕಮಾತ್ರ ಆದರ್ಶವೆಂದರೆ ಸ್ವಾಮಿ ವಿವೇಕಾನಂದರು, ಅವರ ಜೀವನವನ್ನು ಯುವಜನರು ಅಧ್ಯಯನ ಮಾಡಬೇಕು. ಭವ್ಯಭಾರತದ ಕನಸನ್ನು ಸ್ವಾಮಿ ವಿವೇಕಾನಂದರು ಕಂಡದ್ದು ಯುವಜನತೆಯಲ್ಲಿಯೇ. ಹಾಗಾಗಿಯೇ ಅವರು ಹೇಳಿದ್ದು: 'ಯುವಶಕ್ತಿಯನ್ನು ಸಂಘಟಿಸಲೆಂದೇ ಹುಟ್ಟಿದವನು ನಾನು... ಅತ್ಯಂತ ದೀನ-ಹೀನ-ದುರ್ಬಲರಿಗೂ ನೆಮ್ಮದಿ, ನೈತಿಕತೆ, ಧರ್ಮ ಮತ್ತು ವಿದ್ಯೆಯನ್ನು ತಲುಪಿಸಬಲ್ಲ ಅಪ್ರತಿಹತ ಅಲೆಗಳಂತೆ ಭಾರತದಾದ್ಯಂತ ವ್ಯಾಪಿಸಿಕೊಳ್ಳಬೇಕು ಅವರೆಲ್ಲ. ಇದನ್ನು ಮಾಡುವ ಇಲ್ಲವೇ ಆ ಯತ್ನದಲ್ಲಿ ಮಡಿಯುವ ಛಲ ನನ್ನದು.' ಇದು ಅವರ ದೃಢ ನಿಶ್ಚಯವಾಗಿತ್ತು.''

ಸ್ವಾಮಿ ವಿವೇಕಾನಂದರ ಮಾತುಗಳು ಒಂದೆಡೆಯಾದರೆ, ದೂರದಲ್ಲಿದ್ದು ಪತ್ರಗಳ ಮೂಲಕ ಅವರು ತಿಳಿಸಿದ ವಿಚಾರಗಳು ಅಷ್ಟೇ ಪ್ರೇರಕವಾಗಿ ಎಲ್ಲರನ್ನೂ ಎಚ್ಚರಿಸುತ್ತ ಬಂದದ್ದು ಮತ್ತೊಂದೆಡೆ. ಅದು ಅಷ್ಟೇ ವಿಶೇಷ. ಅಂತಹ ಪತ್ರಗಳ ಕೆಲವು ತುಣುಕುಗಳನ್ನು ಅವಗಾಹನೆಗಾಗಿ ಇಲ್ಲಿ ಕೊಡಲಾಗಿದೆ:

ಸ್ವಾಮಿ ವಿವೇಕಾನಂದರು ಯಾವುದಕ್ಕೂ ಎದೆಗುಂದಿದವರಲ್ಲ. ಎಂತಹುದೇ ಕ್ಲಿಷ್ಟ ಪರಿಸ್ಥಿತಿಯನ್ನು ಧೈರ್ಯದಿಂದ, ತಾಳ್ಮೆಯಿಂದ ಎದುರಿಸಿ ಗೆಲುವನ್ನು ಸಾಧಿಸುತ್ತ ಬಂದವರು. ಇತರರಲ್ಲಿಯೂ ಅಂತಹುದನ್ನೆ ಅಪೇಕ್ಷಿಸಿ ಅವರಲ್ಲಿ ಧೈರ್ಯ ತುಂಬುವ ಕೆಲಸವನ್ನು ಅವರು ಮಾಡಿದರು. ಬದುಕು ಕಷ್ಟ-ಸುಖಗಳ ಸಂಗಮ. ಸುಖವನ್ನು ಸ್ವಾಗತಿಸಿ ಸಂತಸಪಡುವಂತೆಯೇ ಕಷ್ಟವನ್ನು ಎದುರಿಸಿ ನಿಲ್ಲುವ ಆತ್ಮಸ್ಥೈರ್ಯವನ್ನು ಬೆಳೆಸಿಕೊಳ್ಳಬೇಕು ಎಂಬ ಆತ್ಮ ವಿಶ್ವಾಸವನ್ನು ತುಂಬುವ ಶಕ್ತಿಶಾಲಿ ಮಾತುಗಳು ಅವರ ಪತ್ರ ಸಾಹಿತ್ಯದಲ್ಲಿ ಪರಿಣಾಮಕಾರಿಯಾಗಿ ವ್ಯಕ್ತಗೊಂಡಿವೆ.

**''ದುಃಖಿಗಳೇ ಪುಣ್ಯವಂತರು; ಏಕೆಂದರೆ, ಸಾಂತ್ವನ ದೊರಕುವುದು ಅವರಿಗೇ.** *(- ಏಸುಕ್ರಿಸ್ತ)* ಇದು ಹೇಗೆ ? - ಇಂತಹ ಸಂಕಟದ ಕ್ಷಣಗಳಲ್ಲೇ ತಾಯ ವಿಲಾಪವನ್ನು ತಂದೆಯ ಆಕ್ರಂದನ ವನ್ನು ಲೆಕ್ಕಿಸದ ಕಾಣದ ಕೈಯೊಂದು ಹೃದಯವನ್ನು ಹಿಂಡಿದಂತಾದಾಗ, ದುಃಖ-ಸಂತಾಪ- ನಿರಾಶೆಯ ಭಾರದಿಂದ ಕಾಲ ಕೆಳಗಿನ ನೆಲವೇ ಕುಸಿದು ಹೋಗುವಂತಾದಾಗ, ಸಮಸ್ತ ದಿಗಂತವೇ ಘೋರ ದುಃಖ-ಹತಾಶೆಗಳ ಅಭೇದ್ಯ ಭಿತ್ತಿಯಂತೆ ತೋರುವಾಗ - ಆಗಲೇ ನಮ್ಮ ಒಳಗಣ್ಣು ತೆರೆಯುವುದು, ಬೆಳಕಿನ ಚಿಲುಮೆ ಚಿಮ್ಮಿ ಕನಸು ಕರಗುವುದು ಮತ್ತು ಆಗಲೇ ನಾವು ಪ್ರಕೃತಿಯ ಪರಮಾದ್ಭುತ ಸತ್ಯಕ್ಕೆ ಮುಖಾಮುಖಿಯಾಗಿ ನಿಲ್ಲುವುದು. ನಿಜ, ಅನೇಕಾನೇಕ ದುರ್ಬಲ ಜೀವಿಗಳನ್ನು ಮುಳಗಿಸಿಬಿಡಬಲ್ಲ ಚಂಡಮಾರುತ ಎದ್ದಾಗಲೇ ವಿವೇಕಶಾಲಿಯಾದ ಧೀರನು, ನಾನಾ ಭಾವ-ರೂಪಗಳಿಂದ ಪೂಜಿಸಲ್ಪಡುವ, ನಿತ್ಯಸತ್ಯನಾದ, ಅನಂತ ಪರಮಾನಂದ ಸ್ವರೂಪಿಯಾದ ಆತ್ಮನನ್ನು ಕಾಣುತ್ತಾನೆ. ಆತ್ಮಶಕ್ತಿಯ ಜ್ಯೋತಿಯನ್ನು ಆ ಧೀರ ಪುರುಷನು ಸಾಕ್ಷಾತ್ಕರಿಸಿಕೊಳ್ಳುತ್ತಾನೆ...ಸೋದರನೇ, ಅನವರತವೂ ಎದೆಗುಂದದೆ ಪ್ರಾರ್ಥನೆ ಸಲ್ಲಿಸು, ನಿನ್ನಿಚ್ಛೆಯಂತಾಗಲಿ ಎಂದು ಹಗಲಿರುಳೂ ಹೇಳುತ್ತಲಿರು, 'ನಿನ್ನಿಚ್ಛೆ' ಎಂದು.''

ಇದು ಶ್ರೀ ಬಾಲಾಜಿರಾವ್ ಎಂಬುವರಿಗೆ ಸ್ವಾಮಿ ವಿವೇಕಾನಂದರು ಬರೆದ ಪತ್ರ. ಅತ್ಯಂತ ದುಃಖಿಯಾಗಿದ್ದ, ನಿರಾಶೆ ಹೊಂದಿ ಬದುಕೇ ಬೇಡವೆನಿಸಿದ್ದ ಅವರಿಗೆ ಬರೆದ ಸಾಂತ್ವನದ ನುಡಿಗಳು. ದುಃಖಿಗಳೇ ಪುಣ್ಯವಂತರು: ಏಕೆಂದರೆ, ಸಾಂತ್ವನ ದೊರಕುವುದು ಅವರಿಗೆ ಎಂಬ ಏಸುವಿನ ನುಡಿಯಿಂದ ಆರಂಭಿಸಿ, ತಮ್ಮ ಆಣಿ ಮುತ್ತುಗಳಿಂದ ಅದಕ್ಕೆ ಮತ್ತಷ್ಟು ಶಕ್ತಿಯನ್ನು ತುಂಬಿ ಬರೆದ ಪತ್ರ ಇದು. ಅವರ ನುಡಿಗಳಲ್ಲಿ ಕೇವಲ ಸಾಂತ್ವನ ಅಡಗಿಲ್ಲ , ಆತ್ಮಸ್ಥೈರ್ಯವನ್ನು ಎಚ್ಚರಗೊಳಿಸಿ, ಹೊಸಬದುಕಿಗೆ ಮುನ್ನುಗ್ಗುವ ಚೈತನ್ಯವನ್ನು ತುಂಬುವ ಮಾಂತ್ರಿಕ ಶಕ್ತಿಯ ನುಡಿಗಳಾಗಿವೆ. ಅವರು ಹೇಡಿತನವನ್ನು ಎಂದೂ ಒಪ್ಪಿಕೊಂಡವರಲ್ಲ, ಅದನ್ನು ಮೆಟ್ಟಿ ನಿಂತು ಸಾಹಸವನ್ನು ಮೆರೆಯಲು ಹುರಿದುಂಬಿಸುವ ಕಾರ್ಯದಲ್ಲಿ ತೊಡಗಿದವರು.

ಶ್ರೀಮತಿ ಮೃಣಾಲಿನಿ ಬೋಸ್ ಎಂಬುವರಿಗೆ ಅವರು ಬರೆದ ಪತ್ರ ಜೀವನದ ನಿಜವಾದ ಅರ್ಥವನ್ನು ಅದರ ಸ್ವರೂಪವನ್ನು, ಅದನ್ನು ಎದುರಿಸಲು ಮಾಡಿಕೊಳ್ಳಬೇಕಾದ ಸಿದ್ಧತೆ ಎಂತಹುದೆಂಬುದನ್ನು ಬೆರಳು ಮಾಡಿ ತೋರಿಸುವಂತಹುದು. ಜೀವನ ಎಂದಿಗೂ ಸರಳರೇಖೆಯಂತಲ್ಲ, ಆಗಲು ಸಾಧ್ಯವೂ ಇಲ್ಲ. ಅದರ ಏರಿಳಿತಗಳನ್ನು ಅಂಕುಡೊಂಕುಗಳನ್ನು ನಿಭಾಯಿಸಲು ಬೇಕಾದ ಸಾಮರ್ಥ್ಯವನ್ನು ಬೆಳೆಸಿಕೊಂಡಾಗಲೇ ಗುರಿಮುಟ್ಟಲು ಸಾಧ್ಯ ಎಂಬುದನ್ನು ಅರಿವಿಗೆ ತರುತ್ತ, ಅದನ್ನು ಎದುರಿಸಲು ಬೇಕಾದ ಶಕ್ತಿ ತುಂಬುವ ಆತ್ಮವಿಶ್ವಾಸದ ನುಡಿಗಳನ್ನೊಳಗೊಂಡ ಪತ್ರ ಇದಾಗಿದೆ:

''..ತಾಯೀ, ಉತ್ಕಂಠಿತರಾಗಬೇಡಿ, 'ಬೆಂಕಿಯನ್ನು ಕೆದಕಿದಾಗಲೇ ಅದು ಚೆನ್ನಾಗಿ ಉರಿಯುವುದು; ತಲೆಗೆ ಏಟು ಬಿದ್ದಾಗಲೇ ಸರ್ಪವು ತನ್ನ ಹೆಡೆಯೆತ್ತುವುದು.' ಹೃದಯದಲ್ಲಿ ವೇದನೆ ತುಂಬಿ ಬಂದಾಗ, ದುಃಖದ ಬಿರುಗಾಳಿ ಸುತ್ತಮುತ್ತಲೂ ವ್ಯಾಪಿಸಿದಾಗ, ಧೈರ್ಯ ಭರವಸೆಯೆಲ್ಲ ಕೈಜಾರಿ ಹೋಗುತ್ತಿರುವಾಗ, - ಇಂಥ ಪ್ರಚಂಡವಾದ ಆಧ್ಯಾತ್ಮಿಕ ಬಿರುಗಾಳಿಯ ಕ್ಷಣಗಳಲ್ಲೇ ಆಂತರ್ಯದ ಅನಂತ-ಬ್ರಹ್ಮಜ್ಯೋತಿಯ ಪ್ರಕಾಶ ತೂರಿ ಬರುತ್ತದೆ. ವೈಭೋಗದ ಮಡಿಲಲ್ಲಿ ಬೆಳೆದವರು, ಸುಖದ ಸುಪ್ಪತ್ತಿಗೆಯಲ್ಲೇ ಓಲಾಡುತ್ತಿರುವವರು, ಎಂದೂ ಒಂದೇ ಒಂದು ಹನಿ ಕಂಬನಿಯನ್ನು ಸುರಿಸದವರು ಯಾರು ತಾನೆ ಮಹಾತ್ಮರಾಗಿದ್ದಾರೆ? ಅಂಥವರು ಯಾರು ತಾನೆ ಅಂತರಂಗದ ನಿಧಿಯಾದ ಬ್ರಹ್ಮಾನಂದವನ್ನು ಪಡೆದುಕೊಂಡಿದ್ದಾರೆ?''

ಸ್ವಾಮಿ ವಿವೇಕಾನಂದರ ಪತ್ರಗಳೆಂದರೆ, ಅವು ಕೇವಲ ಅಕ್ಷರಗಳ ಜೋಡಣೆಯಲ್ಲ, ಸಾಹಿತ್ಯದ ಎಲ್ಲ ಅರ್ಥವಂತಿಕೆಯನ್ನು ಒಳ

ಗೊಂಡು ಬದುಕಿನ ಎಲ್ಲ ಸ್ಥಿತಿಗತಿಗಳನ್ನು ವಿಸ್ತರಿಸಿ ಹೇಳುವ, ಮುನ್ನಡಿಯಿಡಲು ಮಾರ್ಗಸೂಚಿಯಾಗಿ ಧೈರ್ಯಸ್ಥೈರ್ಯ ತುಂಬುವ ಆಶಾಕಿರಣವನ್ನೊಳಗೊಂಡವುಗಳು. ಉಪಮಾನ ಉಪ ಮೇಯಗಳಿಂದ ಕೂಡಿದ ಇಡೀ ಪತ್ರದ ಸಾಲುಗಳು ಸುಂದರ ಪತ್ರಗುಚ್ಛವಾಗಿ ಮನಸ್ಸನ್ನು ಸೂರೆಗೊಳ್ಳುತ್ತವೆ, ವೈಚಾರಿಕತೆಯಿಂದ ತುಂಬಿತುಳುಕಿ ಬುದ್ಧಿಗೆ ಗ್ರಾಸವಾಗುತ್ತವೆ, ಮನಸ್ಸಿಗೆ ನೆಮ್ಮದಿಯ ನ್ನೊದಗಿಸುತ್ತವೆ. ಬದುಕಿನ, ಹೋರಾಟದ ಆಸೆಯನ್ನು ಛಲವನ್ನು ಹಿರಿದಾಗಿಸುತ್ತವೆ.

ವಿವೇಕಾನಂದರ ಜ್ಞಾನದ ಹರವು ಅಪಾರ, ಎಲ್ಲೆ ಇಲ್ಲದ್ದು. ವಿಷಯ ವೈವಿಧ್ಯವೂ ಅಷ್ಟೇ ಅಗಣಿತ. ಇನ್ನು ಅದನ್ನು ನೋಡುವ ದೃಷ್ಟಿ ಮಿತಿ ಇಲ್ಲದ್ದು. ಹಾಗಾಗಿಯೇ ಅವರ ಬರಹ ಮತ್ತು ಮಾತು ಎರಡು ಎಲ್ಲರಿಗೂ ಸೋಜಿಗವನ್ನುಂಟುಮಾಡುವಷ್ಟು ಆಪ್ಯಾಯ ಮಾನವಾಗಿ ಹತ್ತಿರವಾಗುತ್ತವೆ. ಅವರು ಅಲ್ಲಲ್ಲಿ ಸಂದರ್ಭೋಚಿತ ವಾಗಿ ಕೊಡುವ ನಿದರ್ಶನಗಳು, ಉಪಮಾನ, ಉಪಮೇಯಗಳು ವಿಷಯವನ್ನು ಮನದಟ್ಟಾಗಿಸುವಂತೆ, ಚಿತ್ರಶೈಲಿಯಲ್ಲಿದ್ದು ಓದುವ ವನ ಮನಸ್ಸನ್ನು ಸೂರೆಗೊಳ್ಳುತ್ತವೆ.

ಸಂಘಟನೆಗೂ–ವಿವೇಕಾನಂದರಿಗೂ ಇದ್ದಂಥ ನಂಟು ಅಚ್ಚರಿ ಹುಟ್ಟಿಸುತ್ತದೆ. ಅವರಲ್ಲಿನ ಸಂಘಟನಾಶಕ್ತಿ ಅಪ್ರತಿಮವಾದದ್ದು. ವ್ಯಕ್ತಿಗಳನ್ನು ಒಂದುಗೂಡಿಸಿ ಅದನ್ನೊಂದು ಪ್ರಬಲಶಕ್ತಿಯಾಗಿ ಪರಿ ವರ್ತಿಸುವಲ್ಲಿ ಅವರು ತೋರಿದ ಸಾಮರ್ಥ್ಯಕ್ಕೆ ಎಣೆ ಇಲ್ಲ. ಯುವ ಸಂಘಟನೆಯಲ್ಲಿ, ಸಂಘ–ಸಂಸ್ಥೆಗಳ ಸ್ಥಾಪನೆಯಲ್ಲಿ ಅವರು ಪವಾಡ ಸದೃಶವಾದ ಜಾದುವನ್ನೇ ಮಾಡಿ ತೋರಿದ್ದಾರೆ. ಯಾವುದೇ ಮಹತ್ ಸಾಧನೆಗೆ ಸಂಘಟನೆ ಎಷ್ಟು ಮುಖ್ಯ ಎಂಬುದನ್ನು ಸಾಧಿಸಿ ತೋರಿಸಿದವರು ಅವರು. ಅಷ್ಟೇ ಅಲ್ಲ, ಆ ದಾರಿಯನ್ನು ತುಳಿದವ ರಿಗೆ ಅದರ ಮಹತ್ವವನ್ನು ತಿಳಿಸಿ ಮಾರ್ಗದರ್ಶನ ಮಾಡಿ ಧೈರ್ಯ ದಿಂದ ಮುನ್ನುಗ್ಗಲು ಪ್ರೇರೇಪಿಸುವ ಕೆಲಸವನ್ನು ಅವರು ನಿರಂತರ ಮಾಡುತ್ತ ಬಂದರು. ''ಯುವ ಶಕ್ತಿಯನ್ನು ಸಂಘಟಿಸಲೆಂದೇ ಹುಟ್ಟಿದವನು ನಾನು'' ಎಂದು ಅವರೇ ಹೇಳಿಕೊಂಡಿದ್ದಾರೆ. ಶ್ರೀರಾಮಕೃಷ್ಣ ಮಹಾಸಂಘ ಸ್ಥಾಪನೆಯಲ್ಲಿ ಅವರು ಅದನ್ನು ಸ್ವತಃ ಮಾಡಿ ತೋರಿದ್ದಾರೆ.

ಸಂಘಟನೆಯನ್ನು ಕುರಿತು ತಮ್ಮ ಸೋದರ ಸಂನ್ಯಾಸಿಗಳಿಗೆ ಬರೆದ ಪತ್ರವೊಂದು ಹೀಗಿದೆ; ಆದರೆ ಅದು ಬರಿಯ ಪತ್ರ ಅಲ್ಲ. ಅದೊಂದು ಶಕ್ತಿ ಸಂಚಯದ ಹಾಗೂ ಶಕ್ತಿ ಸಂಚಲನದ ಮಹೋಪ ದೇಶ. ಎಂತಹವರನ್ನೂ ಬಡಿದೆಚ್ಚರಿಸುವ ದಿವ್ಯಶಕ್ತಿ ಅದರಲ್ಲಿ ಅಂತ ರ್ಗತವಾಗಿದೆ.

''...ನಮಗಿಂದು ಬೇಕಾಗಿರುವುದು ಸಂಘಟನೆ, 'ಸಂಘಟನೆ' ಎಂದರೆ ಕಾರ್ಯಭಾರ ಹಂಚಿಕೊಳ್ಳುವಿಕೆ ಎಂದರ್ಥ. ಅದರಲ್ಲಿ ಪ್ರತಿ ಯೊಬ್ಬನೂ ತನ್ನ ಸಾಮರ್ಥ್ಯಕ್ಕೆ ಅನುಗುಣವಾದ ಯೋಗದಾನ ನೀಡುತ್ತಾನೆ. ಹೀಗೆ ಎಲ್ಲರ ಸಾಮರ್ಥ್ಯವೂ ಸೇರಿ ಸಮನ್ವಯದ ಆದರ್ಶವನ್ನು ಸಾಧಿಸುತ್ತವೆ. ಈ ಬಗೆಯ ವಿಸ್ತರಣೆಯೇ ಜೀವನ, ಸಂಕುಚಿತತೆಯೇ ಮರಣ. ಸ್ವಂತ ಸುಖವನ್ನೇ ಅರಸುತ್ತ ಸೋಮಾರಿ ಯಾಗಿ ಕಾಲ ಕಳೆಯುವ ಸ್ವಾರ್ಥಿಗೆ ನರಕದಲ್ಲೂ ಸ್ಥಳವಿಲ್ಲ. ನಿಮ್ಮ ಜಡತೆಯ ನಿರಾಶಾಭಾವವನ್ನು ಕಿತ್ತು ಬಿಸುಟು, ಟೊಂಕಕಟ್ಟಿ ಸಿದ್ಧ ರಾಗಿ, ನೀವೀಗ ಕಾರ್ಯೋನ್ಮುಖರಾಗಬೇಕಾಗಿದೆ... ಶೀಲ ನಿರ್ಮಾಣವಾಗಬೇಕಾಗಿದೆ. ನಮಗೆ ಸ್ತ್ರೀಪುರುಷರಿಬ್ಬರೂ ಬೇಕು. ಹಿಮಾಲಯದಿಂದ ಕನ್ಯಾಕುಮಾರಿಯವರೆಗೆ, ಉತ್ತರ ಧ್ರುವದಿಂದ ದಕ್ಷಿಣ ಧ್ರುವದವರೆಗೆ ಜಗತ್ತಿನ ಮೂಲೆ ಮೂಲೆಗೂ ಕಾಳ್ಗಿಚ್ಚಿನಂತೆ ವ್ಯಾಪಿಸಿಕೊಳ್ಳಬಲ್ಲ ಸಾವಿರಾರು ಸ್ತ್ರೀಪುರುಷರು ಬೇಕಾಗಿದ್ದಾರೆ... ಸುಶಿಕ್ಷಿತರು, ಚಾರಿತ್ರ್ಯವಂತರು ಬೇಕು, ಮೂರ್ಖರಲ್ಲ – ತಿಳಿಯಿತೆ? ...ಹರಡಿ ! ಹರಡಿ ! ಎಲ್ಲೆಡೆಗೂ ಹರಡಿಕೊಳ್ಳಿ. ನಾವೊಂದು ಮಹಾ ಕ್ರಾಂತಿಯನ್ನೇ ಉಂಟು ಮಾಡಬೇಕು. ನಾವು ಈ ಸಮಾಜದಲ್ಲಿ ವಿದ್ಯುತ್ಸಂಚಾರ ಮಾಡಬೇಕು. ಈ ಪ್ರಪಂಚದಲ್ಲೇ ವಿದ್ಯುತ್ಸಂಚಾರ ವನ್ನುಂಟು ಮಾಡಬೇಕು. ಇದಕ್ಕಾಗಿ ಮುಂದಾಗಿ.''

ವಿವೇಕಾನಂದರ ನುಡಿಗಳೆಂದರೇ ಹಾಗೆ – ಬೆಂಕಿಯ ಚೆಂಡು. ನೇರ ಹಾಗೂ ದಿಟ್ಟ. ಎಂತಹವರ ಮನಸ್ಸನ್ನು ನಾಟಿ ಎಚ್ಚರಗೊಳಿಸ ಬಲ್ಲ, ವಿದ್ಯುತ್ಸಂಚಾರವನ್ನುಂಟು ಮಾಡಬಲ್ಲಷ್ಟು ಶಕ್ತಿಶಾಲಿಯಾದವು ಗಳು. ಅವರ ದೃಷ್ಟಿ–ಧೋರಣೆ ಎಂದೂ ಸಂಕುಚಿತ ಭಾವನೆಯಿಂದ ಕೂಡಿದ್ದಾಗಲಿ, ಸೀಮಿತ ಪರಿಮಿತಿಯುಳ್ಳದ್ದಾಗಿಯಾಗಲಿ ಆದದ್ದಲ್ಲ. ಅದು ಇಡೀ ವಿಶ್ವವನ್ನು ತಬ್ಬಿಕೊಂಡದ್ದು ವಿಶ್ವಮಾನವತ್ವವನ್ನು ಒಳ ಗೊಂಡದ್ದು. ಸಂಘಟನೆಯಲ್ಲಿ ತೊಡಗುವವರಿಗೆ ಈ ವಿಶಾಲ ಮನೋಭಾವದ ಅಗತ್ಯವೂ ಬೇಕು ಎಂಬುದನ್ನು ಸ್ವಾಮೀಜಿ ಮನ ದಟ್ಟು ಮಾಡಿಕೊಡುತ್ತಾರೆ.

ಇಂತಹ ಒಂದು ಮಹತ್ಕಾರ್ಯಕ್ಕಾಗಿಯೇ ಮದ್ರಾಸೀ ಶಿಷ್ಯರಿಗೆ ಬರೆದ ಪತ್ರದಲ್ಲಿನ ಸಾಲುಗಳು ವಿವೇಕಾನಂದರ ಧ್ಯೇಯೋದ್ದೇಶ ಗಳನ್ನು, ಅಂತಹ ಕಾರ್ಯದಲ್ಲಿ ತೊಡಗುವವರಿಗೆ ಇರಬೇಕಾದ ಅರ್ಹತೆಯನ್ನು ಸ್ಪಷ್ಟ ನುಡಿಗಳಲ್ಲಿ ಅಭಿವ್ಯಕ್ತಿಸುತ್ತವೆ. ಅವರು ನೀಡುವ ಕರೆ ವಿಶಾಲ ಮಾನವ ಕುಲಕ್ಕೆ ಸಂಬಂಧಿಸಿದ್ದು. ಜಾತಿ, ಮತ, ಪಂಗಡಗಳನ್ನು ಮೀರಿದ್ದು:

''ಭಾರತಕ್ಕಿಂದು ಆಕೆಗಾಗಿ ತ್ಯಾಗ ಮಾಡಬಲ್ಲ ಕನಿಷ್ಠ ಪಕ್ಷ ಒಂದು ಸಹಸ್ರ ಯುವ ಪುತ್ರರ ಆವಶ್ಯಕತೆ ಇದೆ . ಆದರೆ ಎಚ್ಚರಿಕೆ, ಒಂದು ಸಹಸ್ರ ಮನುಷ್ಯರು, ಮೃಗಗಳಲ್ಲ! ದೀನರಿಗೆ ಅನುಕಂಪೆ ಯನ್ನೂ ಅನ್ನವನ್ನೂ ನೀಡಬಲ್ಲ, ಅವರಲ್ಲಿ ನವಚೇತನವನ್ನು ಸ್ಫುರಿ ಸಲು ಜೀವನ್ಮರಣಗಳನ್ನು ಲೆಕ್ಕಿಸದೆ ಮುಂದಾಗಬಲ್ಲ, ಅನಾದಿ ಕಾಲದಿಂದ ತುಳಿತಕ್ಕೆ ಸಿಲುಕಿ ಪಶುಗಳ ಮಟ್ಟಕ್ಕೆ ತಳ್ಳಲ್ಪಟ್ಟಿರುವ ಜನರನ್ನು ಮನುಷ್ಯರನ್ನಾಗಿಸಲು ಕೊನೆಯುಸಿರಿರುವವರೆಗೂ ಶ್ರಮಿಸಬಲ್ಲ ಯುವಜನರು, 'ಮನುಷ್ಯರು' ಬೇಕು. ಸಂಘಟನೆಗೆ, ಸೇವೆಗೆ, ತ್ಯಾಗಕ್ಕೆ ಎಂತಹವರು ಬೇಕು ಎಂಬುದನ್ನು ಸ್ವಾಮಿ ವಿವೇಕಾ ನಂದರು 'ಮನುಷ್ಯರು' ಎಂಬ ಪದದಿಂದ ಮತ್ತೆ ಮತ್ತೆ ಅರಿವಿಗೆ ತರುತ್ತಾರೆ. ಆ ಒಂದು ಪದದಲ್ಲಿ ಏನೆಲ್ಲ ಅರ್ಥವನ್ನು ಅವರು ಸೂಚಿಸುತ್ತಾರೆ! ಆಕಾರದಲ್ಲಿ ಮನುಷ್ಯರಂತೆ ಕಾಣುವವರೆಲ್ಲರೂ ಇಂತಹ ಒಂದು ಕಾರ್ಯಕ್ಕೆ ಯೋಗ್ಯರಾಗಲು ಸಾಧ್ಯವಿಲ್ಲವೆಂಬು ದನ್ನು ಅದು ಸ್ಪಷ್ಟಪಡಿಸುತ್ತದೆ. ಸಂಘಟನೆಯ ಒಂದು ಭಾಗ,



೧೮೯೨ರಲ್ಲಿ ಸ್ವಾಮಿ ವಿವೇಕಾನಂದರು ಮೊಟ್ಟ ಮೊದಲ ಬಾರಿಗೆ ಮದ್ರಾಸಿಗೆ ಬಂದಿಳಿದಾಗಿನಿಂದ ಅವರ ಹಿಂಬಾಲಕರಾಗಿ, ಅತ್ಯಂತ ಶ್ರದ್ಧಾಭಕ್ತಿಯಿಂದ ಅವರನ್ನು ಅನುಸರಿಸಿದರು ಅಳಸಿಂಗ ಪೆರುಮಾಳ್. ಸ್ವಾಮೀಜಿಯವರ ದಕ್ಷಿಣಭಾರತದ ಎಲ್ಲ ಬಗೆಯ ಚಟುವಟಿಕೆಗಳ ಕೇಂದ್ರಬಿಂದುವಾಗಿ ಕೆಲಸ ಮಾಡಿದವರು. ಸ್ವಾಮೀಜಿ ಅಳಸಿಂಗ ಪೆರುಮಾಳ್ ಅವರಿಗೆ ಬರೆದ ಪತ್ರಗಳಿಗೆ ಲೆಕ್ಕವಿಲ್ಲ. ''ನಾನು ಅಂಥ ಸಂಘಟಕನನ್ನು ನೋಡಿಯೇ ಇಲ್ಲ'' ಎಂಬ ಮೆಚ್ಚುಗೆಯನ್ನು ಸ್ವಾಮೀಜಿ ವ್ಯಕ್ತಪಡಿಸಿದ್ದಾರೆ.

''ಇಡೀ ವಿಶ್ವಕ್ಕೆ ಈಗ ಬೆಳಕು ಬೇಕಾಗಿದೆ, ಬೆಳಕಿಗಾಗಿ ಅದು ಕಾತರಿಸುತ್ತಿದೆ. ಆ ಬೆಳಕನ್ನು ಭಾರತ ಮಾತ್ರವೇ ಹೊಂದಿದೆ. ಅದಿರುವುದು ಹುರುಳಿಲ್ಲದ ಮಂತ್ರ-ತಂತ್ರಗಳಲ್ಲೋ, ಅರ್ಥವಿಲ್ಲದ ಕಪಟಾಚರಣೆಗಳಲ್ಲೋ ಅಲ್ಲ- ಆತ್ಮನ ಮಹಿಮೆಯನ್ನು ಸಾರುವ ಧರ್ಮದಲ್ಲಿ, ಅತ್ಯುನ್ನತ ಆಧ್ಯಾತ್ಮಿಕ ಸತ್ಯದಲ್ಲಿ. ಆದ್ದರಿಂದಲೇ ಭಗವಂತನು ಸಮಯಚಕ್ರದ ಎಲ್ಲ ಬಗೆಯ ಬಿರುಗಾಳಿಯಿಂದಲೂ ಈ ಜನಾಂಗವನ್ನು ಪಾರುಮಾಡಿ, ಜೀವಂತವಾಗಿ ಉಳಿಸಿದ್ದಾನೆ. ಈಗ ಆ ಸತ್ಯವನ್ನು ಸಾರುವ ಸಮಯವೊದಗಿ ಬಂದಿದೆ. ನನ್ನ ಧೀರ ಪುತ್ರರೇ ನೀವೆಲ್ಲ ಮಹತ್ಕಾರ್ಯಗಳನ್ನು ಸಾಧಿಸಲು ಜನ್ಮವೆತ್ತಿರುವಿರೆಂಬ ದೃಢ ಆತ್ಮವಿಶ್ವಾಸ ನಿಮಗಿರಲಿ.'' ವಿವೇಕಾನಂದರು ಯುವಕರಲ್ಲಿ ಆತ್ಮವಿಶ್ವಾಸವನ್ನು ತುಂಬುವ ಕೆಲಸವನ್ನು ನಿರಂತರವಾಗಿ ಮಾಡುತ್ತ ಬಂದರು. ಆತ್ಮವಿಶ್ವಾಸದ ಕೊರತೆಯೇ ನಮ್ಮೆಲ್ಲ ಹೀನಾಯಸ್ಥಿತಿಗೆ ಕಾರಣ ಎಂಬುದನ್ನು ಅವರು ಮನಗಂಡಿದ್ದರು. ಅಂತೆಯೇ ಭಾರತದ, ಭಾರತೀಯರ ಬಗೆಗೆ ಅವರಿಗೆ ಅಪಾರ ನಂಬಿಕೆ-ವಿಶ್ವಾಸ ಕೂಡ ಇತ್ತು. ಆದರೆ ಅದನ್ನು ಎಚ್ಚರಿಸುವ ಸ್ಪರ್ಶ ಶಕ್ತಿಯೊಂದರ ಅಗತ್ಯವಿದೆ ಎಂಬುದನ್ನು ಅರಿತು ಆ ಕಾರ್ಯದಲ್ಲಿ ಅಹರ್ನಿಶಿ ಶ್ರಮಿಸಿದರು. ಭಾರತದ ಮೂಲಕ ಇಡೀ ಜಗತ್ತನ್ನು ಬೆಳಗುವ ಮಹೋದ್ದೇಶ ಅವರದ್ದಾಗಿತ್ತು. ಅವರ ವಿಶಾಲ ಮನಸ್ಸು, ವಿಶಾಲದೃಷ್ಟಿ ಇದೆಲ್ಲಕ್ಕೂ ಮೂಲವಾಗಿತ್ತು. ಅವರ ಮಾತಿನ-ಕೃತಿಯ ಒಂದೊಂದು ಕಣದಲ್ಲಿಯೂ ಇದು ವ್ಯಕ್ತಗೊಂಡಿದೆ.

ಮದ್ರಾಸೀ ಶಿಷ್ಯರಿಗೆ ಬರೆದ ಪತ್ರವೊಂದರಲ್ಲಿ ಸ್ವಾಮಿ ವಿವೇಕಾನಂದರು ಭಾರತದ ದುಃಸ್ಥಿತಿಗೆ ಕಾರಣವೇನೆಂಬುದನ್ನು, ಅದನ್ನು ಹೋಗಲಾಡಿಸಲು ಯಾವ ಪ್ರಯತ್ನ ಮಾಡಬೇಕೆಂಬುದನ್ನು ವಿಶದಪಡಿಸಿದ್ದಾರೆ. ''ಭಾರತದಲ್ಲಿ ಎಲ್ಲವೂ ಇದೆ, ಆದರೆ ಅದರ ಸದ್ಬಳಕೆ ಮಾಡಿಕೊಳ್ಳುವ ವ್ಯಕ್ತಿಯಾಗಲಿ, ಶಕ್ತಿಯಾಗಲಿ ಇಲ್ಲ'' ಎಂಬುದರ ಕೊರಗು ಅವರಲ್ಲಿ ಕಂಡುಬರುತ್ತದೆ. ಅದನ್ನು ತಮ್ಮ ಶಿಷ್ಯರಿಗೆ ಬರೆದ ಪತ್ರದಲ್ಲಿ ಬಹಿರಂಗಪಡಿಸುತ್ತಾರೆ.

''ನನ್ನ ಜೀವನದ ಒಟ್ಟು ಉದ್ದೇಶವೇನೆಂದರೆ, ಪ್ರತಿಯೊಬ್ಬರ ಮನೆಯ ಬಾಗಿಲಿಗೇ ಉದಾತ್ತ ವಿಚಾರಗಳನ್ನು ತಲುಪಿಸುವಂತಹ ವ್ಯವಸ್ಥೆಯೊಂದನ್ನು ನಿರ್ಮಾಣ ಮಾಡುವುದು. ಅದಾಯಿತೆಂದರೆ, ಸ್ತ್ರೀಪುರುಷರು ತಮ್ಮತಮ್ಮ ಭವಿಷ್ಯವನ್ನು ತಾವೇ ರೂಪಿಸಿಕೊಳ್ಳಬಲ್ಲವರಾಗುತ್ತಾರೆ. ರಾಸಾಯನಿಕ ಘಟಕಗಳನ್ನು ಒಟ್ಟು ಹಾಕುವುದಷ್ಟೇ ನಮ್ಮ ಕೆಲಸ. ಪ್ರಕೃತಿಯ ನಿಯಮಕ್ಕನುಸಾರವಾಗಿ ತನ್ನ

'ತ್ಯಾಗ', ಎಲ್ಲ ಬಗೆಯ ತ್ಯಾಗಕ್ಕೂ ಅವರು ಸಿದ್ಧರಿರಬೇಕಾಗುತ್ತದೆ. ಸಹಕಾರ, ಸಮಾನತೆ ಹಾಗೂ ಸಾಮಾಜಿಕ ಜಾಗೃತಿಗಾಗಿ ಶ್ರದ್ಧೆಯಿಂದ, ಪ್ರಾಮಾಣಿಕತೆ ಹಾಗೂ ಸಮರ್ಪಣಭಾವದಿಂದ ಹಗಲಿರುಳೆನ್ನದೆ ದುಡಿಯುವ 'ಮನುಷ್ಯ'ರನ್ನು ಅವರು ಆಹ್ವಾನಿಸುತ್ತಾರೆ.

ಸ್ವಾಮಿ ವಿವೇಕಾನಂದರ ಪತ್ರಗಳ ವಿಷಯ ವೈವಿಧ್ಯ ಹಾಗೂ ವಿಷಯದ ವೈಶಾಲ್ಯ ಅಗಾಧವಾದದ್ದು. ಮನುಕುಲದ ಒಳಿತನ್ನು ಬಯಸಿದ್ದು. ಅದರಲ್ಲಿ ಪ್ರತಿಯೊಬ್ಬರೂ ಪಾಲ್ಗೊಂಡು ದುಡಿಯಲು ಅವರು ಕರೆ ನೀಡುತ್ತಾರೆ. ನಾವು ಭಾರತೀಯರು ಎಂಬ ಹೆಮ್ಮೆ ಹಾಗೂ ಆತ್ಮ ವಿಶ್ವಾಸವನ್ನು ಮೊದಲು ಬೆಳೆಸಿಕೊಳ್ಳಲು ಅವರು ಹುರಿದುಂಬಿಸುತ್ತಾರೆ.

''ಭಾರತ ಜೀವಿಸಿರುವುದು ಆಧ್ಯಾತ್ಮಿಕತೆಯಲ್ಲಿ, ರಾಜಕೀಯದಲ್ಲಲ್ಲ'' ಎಂಬುದನ್ನು ಅವರು ಸ್ಪಷ್ಟಪಡಿಸುತ್ತಾರೆ. 'ಜನನೀ ಜನ್ಮಭೂಮಿಶ್ಚಸ್ವರ್ಗಾದಪಿ ಗರೀಯಸೀ' ಎಂದು ಹೇಳಿದ ನಾಡಿನಲ್ಲಿಯೇ ಅದರ ಬಗ್ಗೆ ತಾತ್ಸಾರ ಮನೋಭಾವ ತಲೆ ಎತ್ತಿರುವುದು ಅವರಿಗೆ ಸಹಿಸಲಾಗದ ನೋವನ್ನುಂಟುಮಾಡಿದೆ. ಆದರೆ ಭಾರತದ ಆಧ್ಯಾತ್ಮಿಕ ಶಕ್ತಿಯ ಬಗೆಗೆ ಅವರಿಗೆ ಅಪಾರ ವಿಶ್ವಾಸ, ನಂಬಿಕೆ ಇದ್ದದ್ದು ಅವರ ಒಂದೊಂದು ನುಡಿಯಲ್ಲಿಯೂ ವ್ಯಕ್ತಗೊಂಡಿರುವುದನ್ನು ಕಾಣಬಹುದು. ಇಡೀ ವಿಶ್ವಕ್ಕೆ ಬೆಳಕನ್ನು ಕೊಡಬಲ್ಲ ಶಕ್ತಿ ಭಾರತಕ್ಕಿದೆ ಎಂಬುದನ್ನು ಅವರು ಮನಗಂಡಿದ್ದರು. ಅಳಸಿಂಗ ಪೆರುಮಾಳ್ ಎಂಬುವರಿಗೆ ಬರೆದ ಪತ್ರವೊಂದರಲ್ಲಿ ಅವರು ಇದನ್ನು ವ್ಯಕ್ತಪಡಿಸಿದ್ದಾರೆ.

ಪಾಡಿಗೆ ತಾನೇ ಸ್ಪಟಿಕ ನಿರ್ಮಾಣವಾಗುತ್ತದೆ... ಉದ್ದೇಶವನ್ನು ಸ್ಪಷ್ಟವಾಗಿ ನಿಮ್ಮ ಮುಂದಿಟ್ಟುಕೊಂಡು ಅವರವರ ಧರ್ಮಕ್ಕೆ ಧಕ್ಕೆ ಬರದಂತೆ, ಜನಸಮೂಹವನ್ನು ಮೇಲೆತ್ತಬೇಕು.''

ಸ್ವಾಮಿ ವಿವೇಕಾನಂದರು ಬರಡು ವೇದಾಂತ ಬೋಧಿಸುವ ಸಂನ್ಯಾಸಿ ಅಲ್ಲ. ಅವರೊಬ್ಬ ಅಪ್ಪಟ ವಾಸ್ತವವಾದಿ. ಧರ್ಮವನ್ನು ವೈಜ್ಞಾನಿಕ ದೃಷ್ಟಿಯಿಂದ ವಿಶ್ಲೇಷಿಸಿ ಅದರಲ್ಲಿ ಸತ್ಯವನ್ನು ಕಂಡು ಕೊಂಡವರು. ಗುರಿಯನ್ನು ತಲುಪಬೇಕಾದರೆ ಏನನ್ನು ಹೇಗೆ ಮಾಡ ಬೇಕು ಎಂಬುದನ್ನು ಚೆನ್ನಾಗಿ ಅರಿತಿದ್ದವರು. ಆ ವಿಷಯದಲ್ಲಿ ಅವರು ಯಾವ ರಾಜಿಗೂ ಸಿದ್ಧರಿದ್ದವರಲ್ಲ. ಅವರ ಕಾಳಜಿ ಇದ್ದದ್ದು ಮೇಲು-ಕೀಳೆಂಬ ಅಸಮಾನತೆಯನ್ನು ಬುಡಮಟ್ಟ ಇಲ್ಲವಾಗಿಸು ವುದರಲ್ಲಿ. ತಮ್ಮ ಸೋದರ ಸಂನ್ಯಾಸಿಗಳಿಗೆ ಬರೆದ ಪತ್ರದಲ್ಲಿ ಅದನ್ನು ಎಳೆ ಎಳೆಯಾಗಿ ಬಿಚ್ಚಿಟ್ಟಿದ್ದಾರೆ.

''**ಬೆಟ್ಟವು ಮಹಮ್ಮದನ ಬಳಿ ಬರದಿದ್ದರೆ ಮಹಮ್ಮದನೇ ಬೆಟ್ಟದ ಬಳಿಗೆ ಹೋಗಬೇಕು.** ಬಡವರು ಶಾಲೆಗೆ ಬರಲಾಗದಷ್ಟು ಬಡವ ರಾಗಿದ್ದಾರೆ, ನಾವೇ ಅವರಿರುವಲ್ಲಿಗೆ ಹೋಗಬೇಕು. ಕಾವ್ಯವೇ ಮೊದಲಾದ ವಿಷಯಗಳನ್ನು ಕಲಿತು ಅವರಿಗೆ ಆಗ ಬೇಕಾದ್ದೇನೂ ಇಲ್ಲ. ಒಂದು ಸಂಘಟಿತವಾದ ಯೋಜನೆಯನ್ನು ಹಾಕಿಕೊಳ್ಳಿ. ಒಂದಿಷ್ಟು ಮೂಲ ಧನವನ್ನು ಸಂಗ್ರಹಿಸಿ. ಕೆಲವು ನಕ್ಷೆಗಳು, ಭೂಗೋಳಗಳು, ಕ್ಯಾಮರಾ, ಮಾಯಾಲಾಂದ್ರ ರಾಸಾಯನಿಕಗಳು - ಇವೆಲ್ಲ ಬೇಕಾಗುತ್ತವೆ. ಒಂದು ಸರಿಯಾದ ಸ್ಥಳವನ್ನು ಹುಡುಕಿ ಕೊಳ್ಳಿ, ಸುತ್ತಮುತ್ತಲಿನ ಬಡ, ಮುಗ್ಧ ಜನರನ್ನು ಅಲ್ಲಿ ಕಲೆ ಹಾಕಿ, ಮೊದಲು ಅವರಿಗೆ ಧಾರ್ಮಿಕ ವಿಚಾರಗಳನ್ನು ತಿಳಿಸಿ. ಆಮೇಲೆ, ದೃಶ್ಯ-ದೃಷ್ಟಾಂತಗಳ ಮೂಲಕ ವಿವಿಧ ವಿಷಯಗಳನ್ನು ಅವರ ಮಾತೃಭಾಷೆಯಲ್ಲೇ ಬೋಧಿಸಿ, ವಿಜ್ಞಾನವನ್ನು ಕಲಿಸಿಕೊಡಿ. ವಿವಿಧ ದೇಶಗಳ ಆಗು-ಹೋಗುಗಳನ್ನು ಪ್ರಪಂಚದ ಪ್ರಗತಿಯನ್ನು ಅವರು ಕಣ್ತೆರೆದು ನೋಡಲು ನೆರವಾಗಿ. ಜನರ ಗುಡಿಸಿಲಿಗೆ ಹೋಗಿ, ಬಾಗಿಲಿಂದ ಬಾಗಿಲಿಗೆ ಹೋಗಿ, ಮಧ್ಯಾಹ್ನ, ಸಾಯಂಕಾಲ - ಯಾವ ಸಮಯದಲ್ಲಾದರೂ ಸರಿಯೆ - ಅಲ್ಲಿ ಹೋಗಿ ಅವರ ಕಣ್ತೆರೆಸಿ. ಬರಿಯ ಪುಸ್ತಕಗಳಿಂದೇನೂ ಪ್ರಯೋಜನವಿಲ್ಲ, ಮಾತಿನ ಮೂಲಕ ವಿವರಿಸಿ ಹೇಳಿ... ಹೀಗೆ ನಿಮ್ಮ ಕೇಂದ್ರಗಳನ್ನು ವಿಸ್ತರಿಸುತ್ತ ಹೋಗಿ.''

ಸ್ವಾಮಿ ವಿವೇಕಾನಂದರ ಮಾತು ಮತ್ತು ಬರವಣಿಗೆಯಲ್ಲಿ ಸ್ಪಷ್ಟತೆ ಇದೆ. ವಿಷಯದ ಆಳಕ್ಕೆ ಹೋಗಿ ಅಲ್ಲಿಯ ಸಮಸ್ಯೆಯನ್ನು ಅರಿತು, ಅದಕ್ಕೆ ತಕ್ಕ ಪರಿಹಾರವನ್ನು ಸೂಚಿಸುವ ಮನೋವಿಶ್ಲೇಷ ಣಾತ್ಮಕ ವಿವೇಚನೆ ಇದೆ. ಅವರು ಏನಾದರೂ ಒಂದನ್ನು ತಿರಸ್ಕರಿಸಿ ಅಥವಾ ಪುರಸ್ಕರಿಸಿ ಮಾತನಾಡಿದರೆ, ಅದರಲ್ಲಿ ಇತರರಿಗೆ ಎಷ್ಟೇ ಅಚ್ಚರಿ ಕಂಡು ಬಂದರೂ ಅದರಲ್ಲಿ ವಾಸ್ತವಿಕತೆಯ ಸತ್ಯಾಂಶ ಮಡು ಗಟ್ಟಿರುತ್ತದೆ. ''ಕಾವ್ಯವೇ ಮೊದಲಾದ ವಿಷಯಗಳನ್ನು ಕಲಿತು ಅವರಿಗೆ ಆಗಬೇಕಾದ್ದೇನೂ ಇಲ್ಲ'' ಎಂದು ಹೇಳುವಲ್ಲಿ, ''ಅವರ ಮಾತೃಭಾಷೆಯಲ್ಲೇ ಬೋಧಿಸಿ, ವಿಜ್ಞಾನವನ್ನು ಕಲಿಸಿ'' ಎಂಬಂತಹ ವಾಣಿಯಲ್ಲಿ ಅವರ ಅಂತರಾಳದ ಉದ್ದೇಶ ಸ್ಪಷ್ಟಗೊಳ್ಳುತ್ತದೆ. ಮಾರ್ಗದರ್ಶನ ಮಾಡುವವರಿಗೆ - ಪ್ರಾಮಾಣಿಕತೆ, ದೃಢತೆ, ಪರಿಶುದ್ಧತೆ, ವ್ಯವಹಾರಕುಶಲತೆ, ದೂರದೃಷ್ಟಿ, ಧೈರ್ಯ, ಸಾಹಸ ಮನೋಭಾವ ಇವೆಲ್ಲವೂ ಇರಬೇಕಾಗುತ್ತದೆ. ಸ್ವಾಮಿ ವಿವೇಕಾ ನಂದರು ಇವೆಲ್ಲವುಗಳ ಸಂಕೇತ, ಸಂಗಮವೆನಿಸಿದ್ದರು.

ಮಹಾತ್ಮನೆಂದು ಕರೆಸಿಕೊಳ್ಳಲು ಇರಬೇಕಾದ ಪ್ರಮುಖ ಗುಣ ಯಾವುದು ಎಂಬುದನ್ನು ಸ್ವಾಮಿ ವಿವೇಕಾನಂದರು ಅಳಸಿಂಗರಿಗೆ ಬರೆದ ಒಂದು ಪತ್ರದಲ್ಲಿ ಸ್ಪಷ್ಟಪಡಿಸಿದ್ದಾರೆ. ಅವರ ದೃಷ್ಟಿಯಲ್ಲಿ 'ಮಹಾತ್ಮ' ಎಂದು ಕರೆಸಿಕೊಳ್ಳುವವನೇ ಬೇರೆ: ''**ಯಾರ ಹೃದಯ ನೊಂದವರಿಗಾಗಿ ಕರಗಿ ಹರಿಯುವುದೋ ಅಂಥವನನ್ನು ಮಹಾತ್ಮ ನೆನ್ನುತ್ತೇನೆ ನಾನು; ಅವು ಇಲ್ಲದವರೆಲ್ಲ ದುರಾತ್ಮರೇ ಸರಿ. ನಮಗೆ ಯಾವುದೇ ಬಗೆಯ ಮನ್ನಣೆ, ಸಹಾನುಭೂತಿ ದೊರೆಯದೆ ಹೋಗ ಬಹುದು; ನಮ್ಮನ್ನು ಯಾರೂ ಕೇಳುವವರೇ ಇಲ್ಲದೆ, ನಿರ್ಗತಿಕರಂತೆ, ಯಾವೊಂದು ಕೆಲಸವನ್ನು ಸಾಧಿಸಲಾಗದೆ ನಾವು ಅಸುನೀಗಬಹುದು. ಆದರೆ, ನಮ್ಮ ಒಂದೇ ಒಂದು ಸದ್ಭಾವನೆ ಕೂಡ ವ್ಯರ್ಥವಾಗುವು ದಿಲ್ಲ. ಇಂದೋ ನಾಳೆಯೋ ಅದು ಪರಿಣಾಮ ಬೀರುವುದು ಖಂಡಿತ!**''

ಸ್ವಾಮಿ ವಿವೇಕಾನಂದರ ಪತ್ರಗಳು ವಿಚಾರದ ಖನಿ ಅಷ್ಟೇ ಅಲ್ಲ, ವಿಶಿಷ್ಟತೆಯ ಗಣಿ ಕೂಡ. ಎಂತಹವರನ್ನೂ ಎಚ್ಚರಿಸಿ ಹುರಿದುಂಬಿ ಸುವ ಶಕ್ತಿ-ಮೋಹಕತೆಯನ್ನು ಅಲ್ಲಿ ಕಾಣಬಹುದು. ಮನುಕುಲದ ಉದ್ಧಾರದ ಎಳೆಗಳು ಅವರ ಒಂದೊಂದು ನುಡಿಯಲ್ಲಿಯೂ ಹಾಸುಹೊಕ್ಕಾಗಿರುವುದು ಗೋಚರಿಸುತ್ತದೆ. ಅವರ ಮಾತಿನಲ್ಲಿಯೇ ಹೇಳುವುದಾದರೆ: ''**ಯಾರು ಯಾರು ಈ ಪತ್ರವನ್ನು ಓದು ತ್ತಾರೆಯೋ ಅವರೆಲ್ಲ ನನ್ನ ಶಕ್ತಿಯನ್ನು ಪಡೆದುಕೊಳ್ಳುತ್ತಾರೆ. ವಿಶ್ವಾಸ ವಿಡಿ, ಮುನ್ನುಗ್ಗಿ !... ಯಾರೋ ನನ್ನ ಕೈ ಹಿಡಿದು ಈ ರೀತಿ ಬರೆಸುತ್ತಿದ್ದಾರೆಯೇ ಎಂಬಂತೆ ನನಗನ್ನಿಸುತ್ತದೆ...**'' *

*ಆಕರ: ೧) ಸ್ವಾಮಿ ವಿವೇಕಾನಂದರ ಪತ್ರಗಾಯತ್ರಿ*
*೨) ವಿವೇಕಾನಂದ ಕೃತಿಶ್ರೇಣಿ*

## 'ಜಪಯಜ್ಞ' ಕಾರ್ಯಕ್ರಮ

ಬೆಳಗಾವಿಯ ರಾಮಕೃಷ್ಣ ಮಿಷನ್ ಆಶ್ರಮ ದಲ್ಲಿ ಮಾರ್ಚ್ 16 ರಿಂದ 20 ರ ವರೆಗೆ ಮಂತ್ರದೀಕ್ಷೆ ಪಡೆದ ಭಕ್ತರಿಗಾಗಿ **'ಜಪಯಜ್ಞ'** ಕಾರ್ಯಕ್ರಮ ನಡೆಸಲಾಗುವುದು. ಈ ಕಾರ್ಯಕ್ರಮದಲ್ಲಿ ಭಾಗ ವಹಿಸಲು ಬಯಸುವ ಭಕ್ತರು ತಮ್ಮ ಹೆಸರನ್ನು ನೋಂದಾಯಿಸಲು ಬೆಳಗಾವಿ ಆಶ್ರಮವನ್ನು ಸಂಪರ್ಕಿಸಬಹುದಾಗಿದೆ.

**ಫೋನ್: 0831-2432789**
ಇಮೇಲ್: mail@rkmissionashrama.org

# ಶ್ರೀಮಾತೆಯವರ ಕೃಪೆ

ಭಾಗ ೨

ಬಂಗಾಳಿ ಮೂಲ: ಸ್ವಾಮಿ ಅಪೂರ್ವಾನಂದ

ಅನು: ಸ್ವಾಮಿ ಜ್ಞಾನಯೋಗಾನಂದ

ಸಾಯಂಕಾಲ ಮತ್ತೆ ಶ್ರೀಮಾತೆಯವರ ಬಳಿಗೆ ಹೋದೆ. ಅವರು ಪಡಸಾಲೆಯಲ್ಲಿ ಮಣ್ಣಿನ ಜಗಲಿಯ ಮೇಲೆ ಕಾಲು ನೀಡಿ ಕುಳಿತು ತರಕಾರಿ ಹೆಚ್ಚುತ್ತಿದ್ದರು. ಬಂಕುರಾದ ವೈಕುಂಠ ಮಹಾರಾಜರು ನೀಡಿದ ಔಷಧಿಯಿಂದ ತುಂಬ ಉಪಯೋಗವಾಗಿದೆ; ಆಮಶಂಕೆ ತುಸು ಕಡಿಮೆಯಾಗಿದೆ ಎಂದು ಅವರು ಹೇಳಿದರು. ಏನೇನೋ ಮಾತುಕತೆಗಳನ್ನು ಆಡಿದ ನಂತರ ಬರ ಪರಿಹಾರ ಕಾರ್ಯ ಹೇಗೆ ನಡೆದಿದೆ ಎಂದು ಅವರು ಕೇಳಿದರು. ಬರಗಾಲ ಪೀಡಿತರಾದ ಜನರ ಬಗ್ಗೆ ಅವರ ಹೃದಯ ಅತ್ಯಂತ ಕಾಳಜಿಯಿಂದ ಮರುಗುತ್ತಿದೆ ಎಂಬುದು ಅವರ ಮಾತಿನಿಂದ ವ್ಯಕ್ತವಾಯಿತು. ಮನೆಮನೆಗೆ ತೆರಳಿ ಬಡಜನರಿಗೆ ಟಿಕೆಟ್ ಕೊಟ್ಟು ಬರುತ್ತಿದ್ದೆ, ಅಂತೆಯೇ ಬಡವರ ಬಗ್ಗೆ ಹಾಗೂ ಅವರ ಅಗತ್ಯಗಳ ಬಗ್ಗೆ ಮಾಹಿತಿ ಸಂಗ್ರಹಿಸುತ್ತಿದ್ದೆ, ಟಿಕೆಟ್ ಪಡೆದವರಿಗೆ ಹೇಗೆ ಅಕ್ಕಿ ವಿತರಿಸಲಾಗುತ್ತಿದೆ, ಮಹಿಳೆಯರಿಗೆ ಬಟ್ಟೆ ಬರೆ ಹಂಚುತ್ತಿದ್ದ ಸಂಗತಿ – ಇವನ್ನೆಲ್ಲ ನಾನು ಹೇಳುತ್ತಿರುವಾಗ, ನಡುವೆ ವಿವರಿಸಿದ ಒಂದು ಘಟನೆ ಶ್ರೀಮಾತೆಯವರ ಹೃದಯವನ್ನು ತಟ್ಟಿತು. ಒಂದು ದಿನ ಬೆಳಿಗ್ಗೆ ಒಂದು ಹಳ್ಳಿಗೆ ಹೋಗಿ ಮಾಹಿತಿ ಸಂಗ್ರಹಿಸುವಾಗ ತಿಳಿದು ಬಂತು, ಅಕ್ಕಿ ಪಡೆದ ವ್ಯಕ್ತಿ ಮನೆಯಲ್ಲಿರಲಿಲ್ಲ; ಕೆಲಸಕ್ಕಾಗಿ ಎಲ್ಲಿಗೋ ಹೋಗಿದ್ದ. ಕೆಲಸ ಸಿಕ್ಕಿದವರಿಗೆ ಇನ್ನು ಅಕ್ಕಿ ಕೊಡಲಾಗುವುದಿಲ್ಲ. ಅದಕ್ಕಾಗಿ ಅವರ ಬಗ್ಗೆ ವಿಚಾರಿಸಿದ್ದೆ. ಊರ ಹೊರಗೆ ಒಂದು ಗದ್ದೆಯಲ್ಲಿ ಮೊಣಕಾಲುವರೆಗೆ ತುಂಬಿದ್ದ ಕೆಸರು ನೀರಿನಲ್ಲಿ ಪೈರು ಕಂಡುಬಂತು. ಅತ್ತ ಹೋಗಿ ದೂರದಿಂದಲೇ ನೋಡಿದೆ, ಒಬ್ಬಾಕೆ ಹೆಣ್ಣುಮಗಳು ಗದ್ದೆಯ ಬದಿಗೆ ಹೋಗಿ, ಪೈರು ನೆಡಲು ಜೋಡಿಸಿ ರಾಶಿ ಮಾಡಿದ್ದ ಕಟ್ಟುಗಳ ಮರೆಯಲ್ಲಿ ಅಡಗಿಕೊಂಡಳು. ವಿಚಾರಿಸಿದಾಗ ಗೊತ್ತಾಯಿತು, ಹಿಂದಿನ ರಾತ್ರಿ ಆಕೆಗೆ ಒಂದು ಮಗುವಿಗೆ ಜನ್ಮವಿತ್ತಿದ್ದಳು; ಆ ಮಗುವನ್ನು ಹೊತ್ತುಕೊಂಡೇ ಅವಳು ಗದ್ದೆಯಲ್ಲಿ ಕೆಲಸ ಮಾಡಲು ಬಂದಿದ್ದಳು. ನವಜಾತ ಶಿಶುವಿಗೆ ಚಿಂದಿಬಟ್ಟೆ ಹೊದೆಸಿ, ಗದ್ದೆಯ ಬದಿಯಲ್ಲಿ ಇರಿಸಿ, ಆಕೆ ಪೈರು ನೆಡುವ ಕೆಲಸ ಮಾಡುತ್ತಿದ್ದಳು. ಅವಳು ಗದ್ದೆಯಲ್ಲಿ ಕೆಲಸ ಮಾಡುತ್ತಿದ್ದುದನ್ನು ಕಂಡರೆ ನಮ್ಮಿಂದ ಅಕ್ಕಿ ಸಿಗಲಾರದು, ಅದಕ್ಕಾಗಿ ಅವಳು ಅಡಗಿಕೊಳ್ಳಲು ಯತ್ನಿಸಿದಳು. ಆ ಘಟನೆಯನ್ನು ಕೇಳಿ ನನ್ನ ಮನಸ್ಸಿನಲ್ಲಿ ತಳಮಳವುಂಟಾಯಿತು: ಹಿಂದಿನ ರಾತ್ರಿ ಜನ್ಮ ಕೊಟ್ಟ ಮಗುವನ್ನು ಹೊತ್ತುಕೊಂಡು ಕೆಸರು ಗದ್ದೆಯಲ್ಲಿ ಕೆಲಸ ಮಾಡಲು ಬಂದುಬಿಟ್ಟಳಲ್ಲ! ಎಂಥ ಅವಸ್ಥೆಗೆ ಅವಳು ಬಂದುಬಿಟ್ಟಳು! ಅದನ್ನು ಕೇಳಿ ನನಗೆ ಮರ್ಮಾಘಾತವಾಯಿತು. ನಾನು ಹೆಂಗಸಿನ ಬಳಿಗೆ ಹೋಗಿ ತಡವರಿಸುತ್ತ ಹೇಳಿದೆ, ''ಇಲ್ಲಮ್ಮಾ, ನಿನ್ನ ಅಕ್ಕಿಯನ್ನು ತಡೆಹಿಡಿಯುವುದಿಲ್ಲ.'' ಅದರಿಂದ ಅವಳು ತುಸು ಧೈರ್ಯಮಾಡಿ ಕೈಮುಗಿದು ಹೇಳಿದಳು, ''ಸ್ವಾಮಿ, ಭಾರೀ ಕಷ್ಟದಲ್ಲಿ ಸಿಕ್ಕಿಹಾಕಿಕೊಂಡೆ. ಆದ ಕಾರಣ ಗದ್ದೆ ಕೆಲಸಕ್ಕೆ ಬಂದುಬಿಟ್ಟೆ.'' ಅವಳಿಗೆ ಗದ್ದೆ ಕೆಲಸ ಮಾಡಿದರೆ ಮಾತ್ರ ದಿನಕ್ಕೆ ಎರಡು ಸೇರು ಅಕ್ಕಿ ಸಿಗುತ್ತಿತ್ತು.



ಶ್ರೀಮಾತೆ ಈ ಘಟನೆಯನ್ನು ಕೇಳಿ ಆತಂಕದಿಂದ ನಡುಗಿಹೋದರು. ಅವರು ಅಳುತ್ತ ಹೇಳಿದರು, ''ಏನು ಹೇಳುತ್ತೀಯಾ! ಇಂಥ ಬಾಣಂತಿ ಹೆಂಗಸು ಕೆಸರಿನಲ್ಲಿ ಕೆಲಸ ಮಾಡುವುದಕ್ಕಾಗಿ ಬಂದಿದ್ದಾಳೆ. ಈ ಅವಸ್ಥೆಯಲ್ಲಿ ಅವಳ ಪಾಲಿನ ಅಕ್ಕಿಯನ್ನು ತಡೆಹಿಡಿಯುವುದೆ? ನೀನು ಸರಿಯಾದ ಕೆಲಸವನ್ನೇ ಮಾಡಿದ್ದೀ ಮಗೂ. ಶ್ರೀರಾಮಕೃಷ್ಣರು ನಿನಗೆ ಒಳ್ಳೆಯದನ್ನೇ ಮಾಡುವರು.'' ಅನಂತರ ಅವರು ನೋವಿನಿಂದ ಠಾಕೂರರನ್ನು ಪ್ರಾರ್ಥಿಸಿದರು: ''ಠಾಕೂರ್! ನೀವು ಇದನ್ನೆಲ್ಲ ಏಕೆ ನೋಡುತ್ತಿಲ್ಲ? ಜನರಿಗೆ ಎಷ್ಟೊಂದು ದುಃಖ, ದುರ್ದೆಶೆ! ಹೀಗಾದರೆ ಮನುಷ್ಯನು ಏನು ಮಾಡಬೇಕು? ಇವರಿಗೆ ಒಂದು ದಾರಿ ತೋರಿಸಿಕೊಡಿ.'' ಶ್ರೀಮಾತೆಯವರ ಕಂಠದಿಂದ ಹೊರಟ ಕಾತರದ, ಉತ್ಕಂಠೆಯ ಆ ಮಾತುಗಳು ಈಗಲೂ ನನ್ನ ಕಿವಿಯಲ್ಲಿ ಗುಣಗುಣಿಸುತ್ತಿರುತ್ತದೆ. ಶ್ರೀಮಾತೆ ಕರುಣೆಯೇ ಮೂರ್ತಿವೆತ್ತಿ ಬಂದವರು; ಭಾವಪೂರಿತ ಪ್ರಾರ್ಥನೆಯ ಸಾಕಾರರೂಪ.

ಶ್ರೀಮಾತೆ ನನ್ನ ಬಳಿ ಸೇವಾಕಾರ್ಯದ ವಿವರಗಳನ್ನೆಲ್ಲ ವಿಚಾರಿಸಿದರು – ನಾವು ಏನು ಊಟ ಮಾಡುತ್ತೇವೆ, ಎಲ್ಲಿ ತಂಗಿದ್ದೇವೆ,

ಎಂತೆಂಥ ಕೆಲಸ ಮಾಡಬೇಕಾಗುವುದು ಇತ್ಯಾದಿ, ನಾನೆಂದೆ: ''ಒಂದು ದಿನ ಹಳ್ಳಿಯಲ್ಲಿ ಏನೇನು ಕೆಲಸ ನಡೆಯುತ್ತದೆ ಎಂಬುದನ್ನು ನೋಡಲು ಹೋಗಿದ್ದೆ. ಬೆಟ್ಟದಿಂದ ಇಳಿದು ಬರುತ್ತಿದ್ದ ಒಂದು ಸಣ್ಣ ನದಿ ಬತ್ತಿಹೋಗಿತ್ತು. ಸುಮಾರು ಇಪ್ಪತ್ತು-ಇಪ್ಪತ್ತೈದು ಮಾರು ಅಗಲದ ಆ ನದಿಯಲ್ಲಿ ಮೊಣಕಾಲು ತನಕ ನೀರಿತ್ತು. ಆ ನೀರಿನಲ್ಲಿ ಕಾಲಿಟ್ಟು ನದಿ ದಾಟಿದೆ. ಆಗ ಜೋರಾಗಿ ಮಳೆಯಾಗಿತ್ತು. ನಾನು ಹಿಂದಿರುಗಿ ಬರುವಾಗ ಒಣಗಿ ಹೋಗಿದ್ದ ನದಿಯಲ್ಲಿ ಕೆಂಪುಬಣ್ಣದ ನೆರೆ ನೀರು ತುಂಬಿ, ನದಿ ದಡವುಕ್ಕಿ ಹರಿದು ಭೀಕರಸ್ವರೂಪದ ಪ್ರವಾಹವಾಗಿ ಮಾರ್ಪಟ್ಟಿತ್ತು. ಸಮಯ, ಬೇರೆ ಮೀರಿಹೋಗಿತ್ತು. ನದಿ ದಾಟಲು ಬೇರೆ ದಾರಿ ಕಾಣದೆ, ನನ್ನ ಬಟ್ಟೆಬರೆ ಕಳಚಿ, ತಲೆಗೆ ಸುತ್ತಿಕೊಂಡು, ಒಂದು ಕೈಯಲ್ಲಿ ಕೊಡೆ ಹಿಡಿದುಕೊಂಡು ಕೌಪೀನ ಧಾರಿಯಾಗಿ ನದಿಗಿಳಿದೆ, ಒಂದು ಕೈಯಲ್ಲಿ ಈಜಾಡುತ್ತ ನದಿಯ ಪ್ರವಾಹದಲ್ಲಿ ತೇಲುತ್ತಾ ಹೇಗೋ ನದಿಯ ಇನ್ನೊಂದು ದಡ ಸೇರಿದೆ. ಬಹಳ ದೂರದವರೆಗೆ ಪ್ರವಾಹ ನನ್ನನ್ನು ತೇಲಿಸಿಕೊಂಡು ಹೋಗಿತ್ತು. ನದೀತೀರದಲ್ಲಿದ್ದ ಮುಳ್ಳು-ಪೊದೆಗಳಿಂದ ಪ್ರಾಣಾಪಾಯವುಂಟಾಗುವ ಸಂಭವವಿತ್ತು.'' ಈ ಘಟನೆಯನ್ನು ಕೇಳುತ್ತಿದ್ದಂತೆ ಶ್ರೀಮಾತೆಯವರ ಮುಖ ವೇದನೆಯಿಂದ ತುಂಬಿ ಕಳಾಹೀನವಾಯಿತು. ಅವರ ಕರುಣಾಪೂರಿತ ಧ್ವನಿಯಿಂದ, ''ಮಗೂ, ಠಾಕೂರ್ ನಿನ್ನನ್ನು ರಕ್ಷಿಸಿದರು. ಆ ಮುಳ್ಳು-ಪೊದೆಗಳ ನಡುವೆ ಸಿಕ್ಕಿ ಹಾಕಿಕೊಂಡರೆ ಅಲ್ಲಿಂದ ಹೊರಬರಲಾಗದು! ಇನ್ನೆಂದಿಗೂ ನೀನು ಹೀಗೆ ಮಾಡಬೇಡಪ್ಪಾ'' ಎಂದರು. ನನ್ನೆಲ್ಲ ಸಂಕಟಗಳನ್ನೂ ಶ್ರೀಮಾತೆ ತಮ್ಮ ಅಂತರಂಗದಲ್ಲಿ ಅನುಭವಿಸಿದ್ದರು. ತನ್ನ ಮಗುವಿನ ದುಃಖವನ್ನು ಕಂಡು ಅವರ ಮಾತೃಹೃದಯ ಆವೇಗದಿಂದ ಉಕ್ಕಿ ಬಂದಿತ್ತು. ಈಗಲೂ ನನಗೆ ಆಪತ್ತು ಗಂಡಾಂತರಗಳು ಬಂದಾಗಲೆಲ್ಲ ಶ್ರೀಮಾತೆಯವರ ಆ ಸಮಾಧಾನದ ಮಾತುಗಳೇ ಚೈತನ್ಯದಾಯಕವಾಗಿವೆ.

ಮರುದಿನ ಮಾತಿನ ನಡುವೆ ನಾನು ಕಾಮಾರಪುಕುರಕ್ಕೆ ಹೋಗಿ ಬರುವ ನನ್ನ ಇಚ್ಛೆಯನ್ನು ಶ್ರೀಮಾತೆಯವರ ಮುಂದೆ ಹೇಳಿಕೊಂಡೆ, ಆದರೆ ಅದಕ್ಕೆ ಅವರು ಅನುಮತಿ ನೀಡಲಿಲ್ಲ. ಅವರೆಂದರು: ''ಬೇಡ ಮಗೂ, ಈಗ ನೀನು ಕಾಮಾರಪುಕುರಕ್ಕೆ ಹೋಗಬೇಕಾಗಿಲ್ಲ. ಮುಂದೆ ಎಂದಾದರೂ ಹೋಗು. ಈಗ ನೀನು ಹೇಗಾದರೂ ಇಲ್ಲಿ 'ಮೂರುರಾತ್ರಿ' ಗಳನ್ನು ಕಳೆದುಹೋಗು. ಈಗ ಭಯಂಕರ ಮಲೇರಿಯಾ ಇರುವ ಸಮಯ; ಎಲ್ಲ ಮನೆಗಳಲ್ಲೂ ಜ್ವರ. ಇಂಥ ಸಂದರ್ಭದಲ್ಲಿ ಇಲ್ಲಿಗೆ ಬರಲು ನಾನು ಯಾರಿಗೂ ಹೇಳುವುದಿಲ್ಲ. ಅಷ್ಟಾದರೂ ತಾರಕನು ನಿನ್ನನ್ನು ಕಳುಹಿಸಿದ್ದಾನೆ.''

ಶ್ರೀಮಾತೆಯವರ ಮಾತನ್ನು ನಾನು ಪಾಲಿಸಿದೆ. ಬಹಳ ಸಮಯದ ನಂತರ, ೧೯೩೦ರಲ್ಲಿ ನಾನು ಕಾಮಾರಪುಕುರಕ್ಕೆ ಹೋದೆ, ಜಯರಾಮಬಾಟಿಗೂ ಹೋದೆ. ಶ್ರೀಮಾತೆ ವಾಸಿಸುತ್ತಿದ್ದ, ಧ್ಯಾನ ಮಾಡುತ್ತಿದ್ದ ಕೋಣೆ, ಮಂತ್ರದೀಕ್ಷೆ ನೀಡುತ್ತಿದ್ದ ದೇವರಕೋಣೆ - ಇವನ್ನೆಲ್ಲ ನಾನು ದರ್ಶನ ಮಾಡಿ, ನನ್ನ ಪ್ರಣಾಮ ಸಲ್ಲಿಸಿದೆ.

* * *

ನನ್ನ ಬಳಿ ಕೇವಲ ಒಂದು ರೂಪಾಯಿಯಷ್ಟೇ ಉಳಿದಿತ್ತು; ಗುರುದಕ್ಷಿಣೆ ನೀಡಲಾಗಲಿಲ್ಲ , ಗುರುಸೇವೆಯನ್ನೂ ಮಾಡುವ ಸುಯೋಗ ಒದಗಿ ಬರಲಿಲ್ಲ - ಇದರಿಂದ ನನ್ನ ಮನಸ್ಸಿನಲ್ಲಿ ತುಂಬ ಅಶಾಂತಿಯುಂಟಾಗಿತ್ತು. ಮರುದಿನ ಶ್ರೀಮಾತೆಯವರ ಸೇವಕರಾಗಿದ್ದ ವರದ ಮಹಾರಾಜ್ ಕೊತುಲ್‌ಪುರ ಸಂತೆಗೆ ಹೋಗುತ್ತಾರೆ ಎಂದು ತಿಳಿದಾಗ ನಾನೂ ಶ್ರೀಮಾತೆಯವರಿಗೆ ಪ್ರಣಾಮ ಮಾಡಿ, ಅವರೊಂದಿಗೆ ಸಂತೆಗೆ ಹೋದೆ. ಆರು ಮೈಲಿ ದೂರ ಕೆಸರುನೀರಿನಿಂದ ಕೂಡಿದ ರಸ್ತೆಯಲ್ಲಿ ನಡೆದು ಹೋಗಬೇಕಿತ್ತು. ವರದ ಮಹಾರಾಜ್ ಸಂತೆಯಲ್ಲಿ ಒಂದು ಬುಟ್ಟಿ ತುಂಬಾ ತರಕಾರಿ, ಇನ್ನಿತರ ವಸ್ತುಗಳನ್ನು ಖರೀದಿಸಿದರು. ನಾನು ಶ್ರೀಮಾತೆಗಾಗಿ ಒಂದು ತಟ್ಟೆ ಕಲ್ಲುಸಕ್ಕರೆ ಕೊಂಡುಕೊಂಡೆ. ಮಧ್ಯಾಹ್ನ ಕೋಯಲ್‌ಪಾರಾ ಆಶ್ರಮದಲ್ಲಿ ಊಟಮಾಡಿ, ಸಾಯಂಕಾಲ ಬುಟ್ಟಿಯನ್ನು ತಲೆಯ ಮೇಲೆ ಹೊತ್ತುಕೊಂಡು ಜಯರಾಮಬಾಟಿಗೆ ಮರಳಿ ಬಂದೆ. ಬುಟ್ಟಿಯಲ್ಲಿ ಶ್ರೀಮಾತೆಯವರು ಉಪಯೋಗಿಸುವ ವಸ್ತುಗಳಿವೆ, ಅದನ್ನು ಹೊತ್ತು ತರುವುದು ಶ್ರೀಮಾತೆಯವರ ಸೇವೆ ತಾನೆ? ಜಯರಾಮಬಾಟಿಗೆ ಮರಳಿ ಬಂದಮೇಲೆ ನಾನು ಕೊಂಡುಕೊಂಡಿದ್ದ ಒಂದು ತಟ್ಟೆ ಕಲ್ಲುಸಕ್ಕರೆಯನ್ನು ಶ್ರೀಮಾತೆಯವರಿಗೆ ಕೊಟ್ಟೆ. ಅದನ್ನು ಅವರು ಎರಡೂ ಕೈಗಳನ್ನು ಚಾಚಿ ಸ್ವೀಕರಿಸಿದರು, ಹಾಗೂ ಅತ್ಯಂತ ಆನಂದಗೊಂಡು ಹೇಳಿದರು: ''ತುಂಬಾ ಒಳ್ಳೆಯ ಕೆಲಸ ಮಾಡಿದೆ, ಮಗೂ! ಪ್ರತಿದಿನ ನಾನು ಸ್ವಲ್ಪ ಸ್ವಲ್ಪ ಕಲ್ಲುಸಕ್ಕರೆ ಪಾನಕ ಮಾಡಿ ಕುಡಿಯುತ್ತೇನೆ.'' ಆಗ ನನ್ನ ಕಣ್ಣುಗಳಲ್ಲಿ ನೀರು ತುಂಬಿ ಬಂತು. ಅದು ಕೇವಲ ಎಂಟಾಣೆಗೆ ಕೊಂಡುಕೊಂಡ ಕಲ್ಲುಸಕ್ಕರೆ; ಅದನ್ನು ಶ್ರೀಮಾತೆ ಎಷ್ಟೊಂದು ಪ್ರೀತಿಯಿಂದ ಸ್ವೀಕರಿಸಿದರು! ಶ್ರೀಮಾತೆಯವರಿಗೆ ಬೇರೆ ಯಾವ ಸೇವೆಯನ್ನೂ ಮಾಡಲಾಗಲಿಲ್ಲ. ಹಾಗಾಗಿ ಅಂದು ಸಂಜೆ ಪುಣ್ಯಪುಕುರ ಕೆರೆಯ ದಡದಲ್ಲಿರುವ ತೋಟದಲ್ಲಿ, ಶ್ರೀಮಾತೆಯವರ ಸೇವಕ ಹರಿಪ್ರೇಮ ಮಹಾರಾಜ್ ಬದನೆಕಾಯಿ ಗಿಡ ನೆಡುವುದಕ್ಕಾಗಿ ಗುದ್ದಲಿಯಿಂದ ಅಗೆಯುತ್ತಿದ್ದುದ್ದನ್ನು ಕಂಡು, ಅವರಿಂದ ಗುದ್ದಲಿ ತೆಗೆದುಕೊಂಡು, ಗಿಡ ನೆಡಲು ಮಣ್ಣು ಹದ ಮಾಡಲು ಅಗೆಯತೊಡಗಿದೆ; ಅನಂತರ



ಶ್ರೀಮಾತೆಯವರ ಕೋಣೆ, ಜಯರಾಮಬಾಟಿ

ಅವರೊಂದಿಗೆ ಗಿಡ ನೆಡುವುದನ್ನೂ ಆರಂಭಿಸಿಬಿಟ್ಟೆ. ಆ ಗಿಡಗಳಲ್ಲಿ ಬದನೆ ಬೆಳೆಯುವುದು, ಅವುಗಳನ್ನು ಶ್ರೀಮಾತೆಯವರ ಸೇವೆಗೆ ಉಪಯೋಗಿಸಲಾಗುವುದು.

ಹೇಗೋ 'ಮೂರುರಾತ್ರಿ' ಕಳೆದವು. ನಾಲ್ಕನೆಯ ದಿನ ಸಾಯಂಕಾಲ ಶ್ರೀಮಾತೆಯವರಿಗೆ ಪ್ರಣಾಮ ಮಾಡಿ ಹೊರಟುನಿಂತೆ. ನಾನು ಪ್ರಣಾಮ ಮಾಡುವಷ್ಟರಲ್ಲೇ ಶ್ರೀಮಾತೆ ನನ್ನ ಗಲ್ಲ ಸ್ಪರ್ಶಿಸಿ ಚುಂಬಿಸಿದರು. ನಾನು ಹುಡುಗುತನದಿಂದ ಅವರ ಮುಂದೆ ಮೊಣಕಾಲೂರಿ ಕುಳಿತು, ಕೈಮುಗಿದು ಅಳುತ್ತ ಹೇಳಿದೆ, ''ಅಮ್ಮಾ, ನನ್ನನ್ನು ಮರೆಯಬೇಡಿ.'' ಅವರೂ ಕೂಡ ಕರುಣೆಯಿಂದ ತುಂಬಿದ ಧ್ವನಿಯಿಂದ, ''ಆಗಲಿ ಮಗು, ನಿನ್ನನ್ನು ಮರೆಯಲಾರೆ'' ಎಂದರು. ನಾನು ಮೂರು ಬಾರಿ ಹೀಗೆ ಪ್ರಾರ್ಥಿಸುತ್ತ ಹೇಳಿಕೊಂಡೆ, ಅವರೂ ಪ್ರತಿಬಾರಿ, ''ಆಗಲಿ ಮಗೂ, ನಿನ್ನನ್ನು ಮರೆಯಲಾರೆ'' ಎಂದರು. ಅವರು ನನ್ನನ್ನು ಮರೆಯಲಾರರು – ಈ ಭಾವನೆಯಿಂದ ನನ್ನ ಅಂತರಂಗವೆಲ್ಲ ಆನಂದದಿಂದ ತುಂಬಿಕೊಂಡಿತು. ಅದರ ಭರದಲ್ಲಿ ನನ್ನ ಮಾತು ಪೂರ್ತಿಯಾಗದೆ ಉಳಿಯಿತು. ಮತ್ತೆ ಶ್ರೀಮಾತೆಯವರಿಗೆ ಪ್ರಣಾಮ ಮಾಡಿ, ಅವರ ಕಡೆಗೇ ಮುಖ ಮಾಡಿ ಹಿಂದು ಹಿಂದಾಗಿ ನಡೆಯುತ್ತ ಬಾಗಿಲವರೆಗೂ ಬಂದೆ – ಅಲ್ಲಿಯವರೆಗೂ ಶ್ರೀಮಾತೆ ನನ್ನತ್ತ ನೋಡುತ್ತ ನಿಂತಿದ್ದರು. ಕೊನೆಯ ಬಾರಿ ಅವರತ್ತ ನೋಡಿ ಬಾಗಿಲನ್ನು ದಾಟಿ ಹೊರಬಂದೆ; ಅವರ ಕರುಣಾಪೂರಿತ ಮುಖ ಹಾಗೂ ಅವರ ಮಾತುಗಳನ್ನೇ ಮನದಲ್ಲಿ ನೆನೆಯುತ್ತ ಸುಮಾರು ಮೂರು ಮೈಲಿ ದೂರ ನಡೆದು, ಕೋಯಲ್‌ಪಾರಾ ಆಶ್ರಮ ತಲುಪಿದೆ. ನಾನು ಶ್ರೀಮಾತೆಯವರ ಬಳಿ ಭಕ್ತಿ, ಮುಕ್ತಿ ಇವುಗಳಿಗಾಗಿ ಪ್ರಾರ್ಥಿಸಲಿಲ್ಲ; ಅವುಗಳು ನನ್ನ ಮನಸ್ಸಿನಲ್ಲಿ ಮೂಡಿ ಬರಲೇ ಇಲ್ಲ.

ಶ್ರೀಮಾತೆಯವರು ದೊರಕಿದರೆಂದರೆ ಉಳಿದವೆಲ್ಲವೂ ಸಿಕ್ಕಿದಂತೆಯೇ; ಅವರ ಕೃಪೆಗೆ ಪಾತ್ರನಾದರೆ ಉಳಿದೆಲ್ಲವೂ ಲಭಿಸುವುದು. ಸಂಸಾರದ ಕಷ್ಟಕೋಟಲೆಗಳಲ್ಲಿ ಸಿಲುಕಿ ನಾನು ಶ್ರೀಮಾತೆಯವರನ್ನು ಮರೆತೇಬಿಡಬಹುದು; ಕೆಸರು, ಧೂಳುಗಳ ನಡುವೆ ನನ್ನ ದೃಷ್ಟಿ ಮಲಿನಗೊಂಡು ಅವರು ಕಾಣಿಸದೆ ಹೋಗಬಹುದು. ಆದರೆ ಶ್ರೀಮಾತೆ ನನ್ನನ್ನು ನೆನಪಿನಲ್ಲಿಟ್ಟುಕೊಂಡರೆ ಸಾಕು, ನಾನು ಸರಿಯಾದ ದಾರಿಯಲ್ಲಿ ಮುನ್ನಡೆಯಬಲ್ಲೆ. ಅವರು ನನ್ನನ್ನು ನೆನೆದು ತಮ್ಮ ಮಡಿಲಿಗೇರಿಸಿಕೊಂಡು, ಸಂಸಾರದ ಕೆಸರು, ಮಣ್ಣು ನನ್ನ ದೇಹಕ್ಕೆ ಮೆತ್ತಿಕೊಳ್ಳದಂತೆ ಮಾಡಿದರೆ ಮಾತ್ರ ನಾನು ನಿರ್ಮಲನಾಗಿಯೂ ಲಕ್ಷಣವಾಗಿಯೂ ಇರಬಲ್ಲೆ. ಈ ಆಧಾರದಲ್ಲೇ ನಾನು ಶ್ರೀಮಾತೆಯವರಲ್ಲಿ ಒಂದೇ ಒಂದು ಪ್ರಾರ್ಥನೆ ಮಾಡಿದ್ದೆ – ''ಅಮ್ಮಾ, ನೀವು ನನ್ನನ್ನು ಮರೆಯಬೇಡಿ'' ಅಂತ. ಮೂರು ಬಾರಿ ನಾನು ಹೀಗೆ ಪ್ರಾರ್ಥಿಸಿಕೊಂಡಿದ್ದೆ, ಅವರೂ ಮೂರು ಬಾರಿ ನನಗೆ ಅಭಯ ನೀಡಿ ಹೇಳಿದ್ದರು, ''ಆಗಲಿ ಮಗೂ, ನಿನ್ನನ್ನು ನಾನು ಮರೆಯಲಾರೆ.'' ಮುಂದೆ ನಾನು ಶ್ರೀಮಾತೆಯವರ ಸೇವಕರಾಗಿದ್ದ ವರದ ಮಹಾರಾಜರಿಂದ ಕೇಳಿ ತಿಳಿದಿದ್ದೆ, ನಾನು ಹಿಂದಿರುಗಿ ಬಂದ ಮೇಲೆ ಶ್ರೀಮಾತೆಯವರು ಅವರನ್ನು ಕರೆದು, ''ನೋಡು, ಆ ಹುಡುಗ ಮೂರು ಬಾರಿ ಪ್ರಮಾಣ ಮಾಡಿಸಿಕೊಂಡ!'' ಎಂದರಂತೆ. ಶ್ರೀಮಾತೆಯವರ ಬಾಯಿಯಿಂದ ಏನು ಹೊರಬಂತೋ ಅದೇ ಸತ್ಯ. ಅವರು ಮೂರುಬಾರಿ ಸತ್ಯದ ನುಡಿಯನ್ನು ಆಡಿದ್ದರು – ನನ್ನನ್ನು ಮರೆಯಲಾರರು ಎಂಬುದಾಗಿ. ನನ್ನ ಜೀವನದಲ್ಲಿ ಇದೇ ಪರಮಪ್ರಾಪ್ತಿ, ಪರಮ ಆಶೀರ್ವಾದ, ಪರಮ ಅಭಯ ಹಾಗೂ ಅತ್ಯುನ್ನತ ಭರವಸೆ, ಸ್ವಾಂತನ.

ಕೋಯಲ್‌ಪಾರಾ ಆಶ್ರಮದಲ್ಲಿ ಅಂದು ರಾತ್ರಿ ಕಳೆದು, ಮರುದಿನ ಸಣ್ಣಗೆ ಸುರಿಯುತ್ತಿದ್ದ ಮಳೆಯಲ್ಲಿಯೇ ನಾನು ಕೋತುಲ್‌ಪುರ ಮಾರ್ಗವಾಗಿ ವಿಷ್ಣುಪುರ ತಲುಪಿದೆ. ಇಪ್ಪತ್ತನಾಲ್ಕು ಮೈಲಿ ಕೆಸರು, ಕೊಚ್ಚೆ ನಡುವೆ ಕೈಯಲ್ಲೊಂದು ಕೊಡೆಯೂ ಇಲ್ಲದೆ, ಜಡಿಮಳೆಯ ನಡುವೆ ಹಲವಾರು ಮರಗಳ ತಳದಲ್ಲಿ ಆಶ್ರಯ ಪಡೆಯುತ್ತಾ, ಹೇಗೋ ಸಾಯಂಕಾಲದ ನಡುವೆ ವಿಷ್ಣುಪುರ ತಲುಪಿದಾಗ ನಾನು ಅರೆಜೀವವಾಗಿದ್ದೆ.

ಸೇವಾಕೇಂದ್ರವನ್ನು ಯಾವುದೇ ತೊಂದರೆಗಳಿಲ್ಲದೆ ತಲುಪಿದ ವಿಷಯವನ್ನು ಶ್ರೀಮಾತೆಯವರಿಗೆ ಪತ್ರ ಬರೆದು ತಿಳಿಸುವಾಗ, ಅದರಲ್ಲಿ ಕೋಯಲ್‌ಪಾರಾದಿಂದ ವಿಷ್ಣುಪುರದವರೆಗೆ ಮಳೆ, ಕೆಸರು, ಕೊಚ್ಚೆಗಳಿಂದ ಕೂಡಿದ ಇಪ್ಪತ್ತನಾಲ್ಕು ಮೈಲಿ ದೂರು ಕ್ರಮಿಸುವಾಗ ಉಂಟಾದ ಕಷ್ಟವನ್ನೆಲ್ಲ ವಿವರಿಸಿ ಬರೆದಿದ್ದೆ. ನನ್ನ ಪತ್ರವನ್ನೋದಿ ಶ್ರೀಮಾತೆ ತುಂಬಾ ಚಿಂತೆಗೀಡಾಗಿದ್ದರು. ಅವರ ಸೇವಕರಾಗಿದ್ದ ವರದ ಮಹಾರಾಜ್ ನನಗೆ ಬರೆದಿದ್ದರು, 'ಈ ರೀತಿ ದಾರಿ ನಡುವೆ ತೊಂದರೆಯುಂಟಾಗಿ ಕಷ್ಟಪಟ್ಟ ಕಥೆಯನ್ನೆಲ್ಲ ಶ್ರೀಮಾತೆಗೆ ಬರೆಯಬಹುದೆ? ಅದನ್ನು ತಿಳಿದು ಅವರು ತುಂಬಾ ಅಧೈರ್ಯ ತಾಳಿದ್ದಾರೆ' ಇತ್ಯಾದಿ. ಅದಕ್ಕೆ ಉತ್ತರವಾಗಿ ನಾನು ಚೆನ್ನಾಗಿದ್ದೇನೆ ಎಂದು ಬರೆದು ತಿಳಿಸಿದೆ. ಹೀಗೆ ಶ್ರೀಮಾತೆಯವರಿಗೆ ಪತ್ರಮುಖೇನ ತಿಳಿಸಿದ್ದರಿಂದ ಅವರು ಚಿಂತಾಕ್ರಾಂತರಾದುದಕ್ಕೆ ನನಗೇನೂ ದುಃಖವಾಗಲಿಲ್ಲ, ನನಗೆ ತುಂಬಾ ಆನಂದವುಂಟಾಯಿತು – ಶ್ರೀಮಾತೆ ನನಗೋಸ್ಕರ ಅಷ್ಟೊಂದು ಕಾತರಗೊಂಡರಲ್ಲ! ಅವರ ಆಶೀರ್ವಾದದಿಂದಲೇ ಇಂಥ ಮಲೇರಿಯಾ ಹರಡುವ ಸಮಯದಲ್ಲೂ ನಾನು ಆರೋಗ್ಯದಿಂದಿದ್ದೆ. ಮಕ್ಕಳನ್ನು ಕುರಿತು ಮಾತೆ ಚಿಂತಿಸದಿದ್ದರೆ ಇನ್ನಾರು ಚಿಂತಿಸಬೇಕು?

೧೯೨೦ನೇ ಇಸವಿ. ಶ್ರೀಮಾತೆಗೆ ತುಂಬಾ ಅನಾರೋಗ್ಯವೆಂದು ಮಹಾಪುರುಷ ಮಹಾರಾಜರ ಪತ್ರದಿಂದ ತಿಳಿಯಿತು. ಈ ವಾರ್ತೆ ತಿಳಿದ ಸಮಯದಿಂದ ಶ್ರೀಮಾತೆಯವರನ್ನು ನೋಡಲು ನನ್ನ ಮನಸ್ಸು ಚಡಪಡಿಸತೊಡಗಿತು. ಬೇಲೂರು ಮಠಕ್ಕೆ ಹಿಂದಿರುಗಲು ಅನುಮತಿ ಕೋರಿ ಮಹಾಪುರುಷ ಮಹಾರಾಜರಿಗೆ ಪತ್ರ ಬರೆದೆ. ಅವರು ಉತ್ತರವಾಗಿ ಅನುಮತಿ ನೀಡಿದರು, ಅದರೊಂದಿಗೆ ದಾರಿ ಖರ್ಚನ್ನೂ ಕಳುಹಿಸಿ, ಇನ್ನಷ್ಟು ದಿನ ಅಲ್ಲಿ ನಾನು ತಂಗಿದ್ದರೆ ನನ್ನ ಆರೋಗ್ಯ ಉತ್ತಮಗೊಳ್ಳುತ್ತಿತ್ತು ಎಂದೂ ಬರೆದರು. ಆದರೆ ಶ್ರೀಮಾತೆಯವರನ್ನು ನೋಡಲು ತುಂಬಾ ಕಾತರವುಂಟಾಗಿದ್ದರೆ, ಬೇಲೂರು ಮಠಕ್ಕೆ ಹಿಂದಿರುಗಬಹುದು ಎಂದೂ ತಿಳಿಸಿದರು.

ಕೆಲವು ದಿನಗಳಲ್ಲೇ ನಾನು ಬೇಲೂರು ಮಠಕ್ಕೆ ಹಿಂದಿರುಗಿದೆ. ಮರುದಿನವೇ ನಾನು ಶ್ರೀಮಾತೆಯವರನ್ನು ಭೇಟಿಯಾಗಲು

'ಶ್ರೀಮಾತೆಯವರ ಮನೆ' (ಉದ್ಬೋಧನ)ಗೆ ಹೋದೆ. ಆದರೆ ಶ್ರೀಮಾತೆಯವರ ಆರೋಗ್ಯ ತುಂಬಾ ಕೆಟ್ಟಿದ್ದುದರಿಂದ ಅವರ ದರ್ಶನ ಇತ್ಯಾದಿಗಳನ್ನೆಲ್ಲ ನಿಲ್ಲಿಸಿಬಿಟ್ಟಿದ್ದರು. ಆದರೂ ಬೇಲೂರು ಮಠದಿಂದ ನಾನು ಹೋಗಿದ್ದರಿಂದ ಪೂಜ್ಯ ಶರತ್ ಮಹಾರಾಜರು ನನಗೆ ವಿಶೇಷ ಅನುಮತಿ ನೀಡಿದರು. ಶ್ರೀಮಾತೆಯವರನ್ನು ದೂರ ದಿಂದ ದರ್ಶನ ಮಾಡಿ ಪ್ರಣಾಮ ಸಲ್ಲಿಸಲು ಸಾಧ್ಯವಾಯಿತು. ಅವರ ದೇಹಾರೋಗ್ಯದ ಪರಿಸ್ಥಿತಿಯನ್ನೆಲ್ಲ ತಿಳಿದುಕೊಂಡ ಬಳಿಕ ಬೇಲೂರು ಮಠಕ್ಕೆ ಮರಳಿದೆ. ಆಗ ಶ್ರೀಮಾತೆಯವರ ಪಾದಗಳನ್ನು ಸ್ಪರ್ಶ ಮಾಡಿ ಪ್ರಣಾಮ ಮಾಡಲಾಗಲಿಲ್ಲ, ಅವರೊಂದಿಗೆ ಒಂದೆರಡು ಮಾತುಗಳನ್ನೂ ಆಡಲಾಗಲಿಲ್ಲ. ಇದನ್ನು ನೆನೆದು ಮನಸ್ಸಿಗೆ ತುಂಬಾ ಸಂಕಟವಾಯಿತು. ಹಿಂದೆ ಜಯರಾಮಬಾಟಿಯಲ್ಲಿ ಶ್ರೀಮಾತೆಯವರನ್ನು ಹೇಗೆ ಕಂಡಿದ್ದೆ, ಅವರ ಬಳಿ ಕುಳಿತು ಏನೇನು ಮಾತನಾಡಿದ್ದೆ, ಅವರ ಪಾದಗಳನ್ನು ಮುಟ್ಟಿ ನಮಸ್ಕಾರ ಮಾಡಿದ್ದೆ – ಇದೆಲ್ಲವೂ ನೆನಪಾಗತೊಡಗಿತು.

ಶ್ರೀಮಾತೆಯವರ ಆರೋಗ್ಯ ಚೆನ್ನಾಗಿಲ್ಲವೆಂದು ಮಹಾಪುರುಷ ಮಹಾರಾಜರು ಪ್ರತಿದಿನವೂ ಬೇಲೂರು ಮಠದಿಂದ ಒಬ್ಬರನ್ನು 'ಉದ್ಬೋಧನ' ಕ್ಕೆ ಕಳುಹಿಸಿ, ಅವರ ಸುದ್ದಿ ತಿಳಿದುಕೊಂಡು ಬರುವಂತೆ ವ್ಯವಸ್ಥೆ ಮಾಡಿದ್ದರು. ಇನ್ನೂ ಆಗ ಬೇಲೂರು ಮಠದಲ್ಲಿ ಟೆಲಿಫೋನ್ ಅಥವಾ ವಿದ್ಯುಚ್ಛಕ್ತಿ ಬಂದಿರಲಿಲ್ಲ. ನಾನು 'ಉದ್ಬೋಧನ' ದಿಂದ ಹಿಂದಿರುಗಿ ಮಹಾಪುರುಷ ಮಹಾರಾಜರಿಗೆ ಪ್ರಣಾಮ ಮಾಡುತ್ತಿದ್ದಂತೆಯೇ ಅವರು ಶ್ರೀಮಾತೆಯವರ ವಾರ್ತೆಯೇನೆಂದು ವಿಚಾರಿಸಿದರು. ಶ್ರೀಮಾತೆಯವರ ಕೈ, ಕಾಲುಗಳಲ್ಲಿ ನೀರು ತುಂಬಿ ಕೊಂಡಿತ್ತು. ಎರಡೂ ಕಾಲುಗಳು ಊದಿಕೊಂಡಿದ್ದವು. ಅದರೊಂದಿಗೆ ನಾಲಿಗೆ ರುಚಿಯೇ ಬತ್ತಿಹೋಗಿತ್ತು. ಶರತ್ ಮಹಾರಾಜರು ಹೇಳಿದ್ದೇನೆಂದರೆ ವೈದ್ಯರು 'ಶ್ವೇತ ಪುನರ್ನವ' ಸೊಪ್ಪಿನ ಪಥ್ಯ ಹಾಗೂ ಅರುಚಿಗಾಗಿ ಆಮರುಲ್ ಸೊಪ್ಪಿನ ಚಟ್ನಿ ಮಾಡಿ ಸೇವಿಸಲು ಹೇಳಿದ್ದಾರೆ, ಎಂದು. ಅದನ್ನು ಕೇಳಿದ ಮಹಾಪುರುಷ ಮಹಾರಾಜರು ಹೇಳಿದರು: ''ಬೇಲೂರು ಮಠದ ತೋಟದಲ್ಲಿ ಬೇಕಾದಷ್ಟು ಪುನರ್ನವ, ಅಮರುಲ್ ಸೊಪ್ಪು ಎರಡೂ ಇವೆ. ನೀನು ಪ್ರತಿದಿನ ಬೆಳಿಗ್ಗೆ ಅವುಗಳನ್ನು ತೆಗೆದುಕೊಂಡು ಹೋಗಿ, ಬರುತ್ತಾ ಶ್ರೀಮಾತೆಯವರ ಸುದ್ದಿಯನ್ನು ತಿಳಿದುಕೊಂಡು ಬಾ.'' ಅವರ ಮಾತಿನಂತೆ ನಾನು ಪ್ರತಿದಿನ ಬೆಳಿಗ್ಗೆ ಒಳ್ಳೆಯ ಪುನರ್ನವ ಹಾಗೂ ಅಮರುಲ್ ಸೊಪ್ಪುಗಳನ್ನು ಸಂಗ್ರಹಿಸಿ, ಬಾಳೆಲೆಯಲ್ಲಿ ಕಟ್ಟಿ, ನೌಕೆಯಲ್ಲಿ ಗಂಗಾನದಿ ದಾಟಿ, ಕುಟಿಘಾಟ್‌ನಲ್ಲಿಳಿದು, ಅಲ್ಲಿಂದ ಕಾಲ್ನಡಿಗೆಯಲ್ಲಿ ಎಂಟುಗಂಟೆಗೆ ಮೊದಲೇ 'ಉದ್ಬೋಧನ' ತಲಪುತ್ತಿದ್ದೆ. ಅಲ್ಲಿ ಸೊಪ್ಪುಗಳನ್ನೆಲ್ಲ ಶ್ರೀಮಾತೆಯವರ ಸೇವಕ ಮಹಾರಾಜರ ಕೈಗೆ ಕೊಟ್ಟು, ದೂರದಿಂದಲೇ ಶ್ರೀಮಾತೆಯವರಿಗೆ ಪ್ರಣಾಮ ಸಲ್ಲಿಸಿ, ಅವರನ್ನು ಕುರಿತ ಸುದ್ದಿಯನ್ನೆಲ್ಲ ಕೇಳಿ ತಿಳಿದುಕೊಂಡು, ಮರಳಿ ಬಂದು ಮಹಾಪುರುಷ ಮಹಾರಾಜರಿಗೆ ಎಲ್ಲವನ್ನೂ ಹೇಳುತ್ತಿದ್ದೆ. ಮಹಾಪುರುಷ ಮಹಾರಾಜರು ಅದನ್ನು ತುಂಬ ಗಂಭೀರವಾಗಿ ಕೇಳಿಸಿಕೊಳ್ಳುತ್ತಿದ್ದರು. ಅಂತೆಯೇ ಬೇಲೂರು ಮಠದ ಇತರ ಸಾಧುಗಳೂ ಕೇಳಿ ತಿಳಿದುಕೊಳ್ಳುತ್ತಿದ್ದರು. ಹೀಗೆ ಸುಮಾರು ಒಂದೂವರೆ ತಿಂಗಳು ಪ್ರತಿದಿನ ಶ್ರೀಮಾತೆಯವರ ದರ್ಶನ ಮಾಡುವ ಸೌಭಾಗ್ಯ ನನಗೆ ಲಭ್ಯವಾಗಿತ್ತು. ಎಲ್ಲಕ್ಕಿಂತ ಆಶ್ಚರ್ಯಕರವಾದ ವಿಷಯವೆಂದರೆ, ಈ ಒಂದೂವರೆ ತಿಂಗಳಲ್ಲಿ ಶ್ರೀಮಾತೆಯವರಿಗೆ ದೂರದಿಂದ ಪ್ರಣಾಮ ಮಾಡುವಾಗಲೆಲ್ಲ, ಪ್ರತಿದಿನವೂ ಅವರು ತಮ್ಮ ರುಗ್ಣ ಶರೀರದಿಂದ ವರಾಂಡದ ಬಾಗಿಲ ಕಡೆಗೆ ಮುಖಮಾಡಿ ನೋಡುತ್ತ ನೆಲದಲ್ಲಿ ಮಲಗಿರುತ್ತಿದ್ದರು; ನಾನು ಪ್ರಣಾಮ ಮಾಡುತ್ತಿದ್ದಾಗ ಅವರು ನನ್ನತ್ತ ಕಾತರದಿಂದ ಕೂಡಿದ ನೋಟದಿಂದ ಸ್ನೇಹಪೂರ್ವಕವಾಗಿ ನೋಡುತ್ತಿದ್ದರು. ಆಹಾ! ಆ ನೋಟದಲ್ಲಿ ಅದೆಂಥ ಪ್ರೀತಿ, ಮಮತೆ ಹಾಗೂ ಕರುಣೆ ತುಂಬಿತ್ತು! ಅವರು ಏನನ್ನೂ ಆಡಲಿಲ್ಲ, ಆದರೆ ಆ ನೋಟದಿಂದಲೇ ಕರುಣೆಯ ಮಳೆಗರೆದರು. ಪ್ರೀತಿ–ವಾತ್ಸಲ್ಯಗಳ ಸ್ಪರ್ಶ ನೀಡಿದರು. ಅವರ ನೋಟಕ್ಕೆ ಮುಖಾಮುಖಿಯಾದಾಗಲೆಲ್ಲ ಆ ನೋಟದಲ್ಲಿ ನಾನು ಒಂದಾಗಿಬಿಡುತ್ತಿದ್ದೆ; ನನ್ನ ಅಂತರಂಗವನ್ನೆಲ್ಲ ಅವರು ಪ್ರೀತಿಯಿಂದ ಮೀಯಿಸಿಬಿಡುತ್ತಿದ್ದರು. ಅನಿರ್ವಚನೀಯವಾದ ಒಂದು ದಿವ್ಯಾನಂದದಿಂದ ನನ್ನ ಹೃದಯ ತುಂಬಿಬಿಡುತ್ತಿತ್ತು. ಅವರಿಗೆ ಪ್ರಣಾಮ ಮಾಡಿ, ಬಾಗಿ ನಮಸ್ಕರಿಸಿ, ಕೈಮುಗಿದು ಮೌನವಾಗಿ ಪ್ರಾರ್ಥನೆ ಮಾಡಿ ನಾನು ಮರಳಿ ಬರುವಾಗ ಶ್ರೀಮಾತೆಯವರ ಕಣ್ಣೀರು ತುಂಬಿದ ಮೃದುವಾದ ಎರಡೂ ಕಣ್ಣುಗಳಿಂದ ಕರುಣೆಯೇ ಹರಿದು ಬರುವಂತೆ ಅನ್ನಿಸುತ್ತಿತ್ತು. ನಾನು ಎಷ್ಟು ದೂರದವರೆಗೆ ಅವರತ್ತ ನೋಡುತ್ತಿದ್ದೆನೋ, ಅಲ್ಲಿಯ ತನಕವೂ ಶ್ರೀಮಾತೆ ನನ್ನತ್ತ ಎವೆಯಿಕ್ಕದೆ ನೋಡುತ್ತಿದ್ದರು.

ಈ ಸಮಯದಲ್ಲೇ ಒಂದು ದಿನ ನಾನು 'ತಾಯಿಯ ಮನೆ' ಉದ್ಬೋಧನದಿಂದ ಹಿಂದಿರುಗಿ ಮಹಾಪುರುಷ ಮಹಾರಾಜರಿಗೆ ಪ್ರಣಾಮ ಮಾಡುತ್ತಿದ್ದಂತೆಯೇ, ಅವರು ಶ್ರೀಮಾತೆಯವರ ಕುಶಲ ವಾರ್ತೆ ವಿಚಾರಿಸಿದರು. ಶ್ರೀಮಾತೆಯವರ ಚಿಕಿತ್ಸೆ, ಪಥ್ಯ ಮೊದಲಾದ ವಿಷಯಗಳನ್ನು ಹೇಳುತ್ತ, ರಾತ್ರಿ ವೇಳೆ ಅವರಿಗೆ ಸ್ವಲ್ಪವೂ ನಿದ್ದೆ ಬರಲಿಲ್ಲವೆಂದೂ, ಅವರ ಸರ್ವಾಂಗವೂ ಅಸಹನೀಯ ಉರಿಯಿಂದ ಕೂಡಿ, ನಿರಂತರ ಅವರು ಚಡಪಡಿಸುತ್ತಿದ್ದರೆಂದೂ ಹೇಳಿದೆ. ಅದನ್ನು ಕೇಳುತ್ತ ಮಹಾಪುರುಷ ಮಹಾರಾಜರ ಕಣ್ಣುಗಳು ತುಂಬಿಕೊಂಡವು. ಅವರು ಕಂಪಿಸುವ ಧ್ವನಿಯಿಂದ ಹೇಳಿದರು: ''ಅಯ್ಯೋ! ಎಲ್ಲರ ಪಾಪಗಳನ್ನು ಸ್ವೀಕರಿಸಿದ್ದರಿಂದಲೇ ತಾಯಿಗೆ ಇಷ್ಟೊಂದು ಅನಾರೋಗ್ಯವುಂಟಾಯಿತು. ಈ ಕಾರಣದಿಂಲೇ ಅವರ ದೇಹದ ಅಂಗಗಳಲ್ಲೆಲ್ಲ ಈ ರೀತಿ ಉರಿಯುಂಟಾಗಿದೆ. ಅವರು ನೂರಾರು ಮಂದಿ ಮಕ್ಕಳ ಪಾಪ, ತಾಪಗಳನ್ನೆಲ್ಲ ತಮ್ಮತ್ತ ಸೆಳೆದುಕೊಂಡು, ಅವರನ್ನು ಪಾಪರಹಿತರನ್ನಾಗಿ ಮಾಡಿದರು. ಶ್ರೀ ಶ್ರೀ ಠಾಕೂರರ ಕೃಪೆ ಹಾಗೂ ಶ್ರೀಮಾತೆಯವರ ಕೃಪೆ – ಎರಡೂ ಒಂದೇ. ಶ್ರೀರಾಮಕೃಷ್ಣರು ತಮ್ಮ ಮಾನವದೇಹವನ್ನು ತ್ಯಜಿಸಿದ ನಂತರ ಈಗ ಶ್ರೀಮಾತೆಯವರ ದೇಹದಲ್ಲಿ ವಾಸ ಮಾಡುತ್ತಿದ್ದಾರೆ. ಯಾರು ಶ್ರೀಮಾತೆಯವರ ಕೃಪೆಗೆ ಪಾತ್ರರಾಗಿದ್ದಾರೋ, ಅವರದು ಇದೇ ಕೊನೆಯ ಜನ್ಮ. ಅಮ್ಮಾ, ಅಮ್ಮಾ, ನೀನು ಭಕ್ತರಿಗಾಗಿ ಎಷ್ಟೊಂದು ಕಷ್ಟಗಳನ್ನು ಅನುಭವಿಸುತ್ತಿರುವೆ!



**ಶ್ರೀಮಾತೆಯವರು ವಾಸಿಸುತ್ತಿದ್ದ ಕೊಠಡಿ, 'ಉದ್ಬೋಧನ'**

''ಒಂದು ದಿನ ಶ್ರೀರಾಮಕೃಷ್ಣರು ನನಗೆ ಹೇಳಿದ್ದರು, 'ಯಾರು ಅಲ್ಲಿ ನಹಬತ್‌ನಲ್ಲಿದ್ದಾರೋ, ಹಾಗೂ ಅಲ್ಲಿ ದೇವಾಲಯದಲ್ಲಿ ಭವ ತಾರಿಣಿಯಾಗಿದ್ದಾಳೋ – ಇಬ್ಬರೂ ಒಂದೇ' ಅಂತ. ಆಗ ನನಗೆ ಇವೆಲ್ಲ ಹೇಗೆ ಅರ್ಥವಾಗಬೇಕು! ಅವರು ಹೇಳುತ್ತಿದ್ದುದನ್ನು ಅದನ್ನು ಕೇಳಿ ನಾನು ಆಶ್ಚರ್ಯಚಕಿತನಾಗಿದ್ದೆ. ಯಾರು ಶ್ರೀಮಾತೆ ಯವರ ದರ್ಶನ ಮಾಡಿದ್ದಾರೋ ಅವರು ಮುಕ್ತರಾಗುವರು. ಶ್ರೀಮಾತೆಯವರ ದರ್ಶನವೆಂದರೆ ಅದೇನು ಕಡಿಮೆ ಭಾಗ್ಯದ ಮಾತೆ?'' ಹೀಗೆ ಹೇಳುತ್ತ ಅವರ ಕಂಠ ಬಿಗಿದುಕೊಂಡಿತು.

ಆಗ ನಾನು ಅಳುತ್ತ ಹೇಳಿದ್ದೆ, ''ನಾನು ಶ್ರೀಮಾತೆಯವರ ದರ್ಶನವನ್ನು ಪ್ರತಿದಿನವೂ ಮಾಡಿದೆ, ಆದರೆ ಅವರ ಬಾಯಿಯಿಂದ ಒಂದು ಮಾತನ್ನೂ ಕೇಳಲಾಗಲಿಲ್ಲ. ನನಗೆ ಅನ್ನಿಸುತ್ತಿತ್ತು, ಆಹ, ಅವರು ಒಂದು ಮಾತನ್ನಾದರೂ ಆಡುವರು ಅಂತ.''

ಆಗ ಮಹಾಪುರುಷ ಮಹಾರಾಜರು ಅತ್ಯಂತ ಆವೇಗಭರಿತ ಸ್ವರದಲ್ಲಿ ಹೇಳಿದರು, ''ನೋಡು, ಶ್ರೀಮಾತೆ ನಿನ್ನ ಕಡೆಗೆ ನೋಡುತ್ತ ಇದ್ದುಬಿಟ್ಟರಲ್ಲ, ಅದೇ ಅವರ ಆಶೀರ್ವಾದ. ಅವರು ಕೃಪಾದೃಷ್ಟಿ ಯಿಂದಲೇ ನಿನ್ನನ್ನು ನೋಡಿದರು. ನಿನ್ನ ಜೀವನ ಧನ್ಯವಾಯಿತು. ನೀನು ಶ್ರೀಮಾತೆಯವರ ಕೃಪೆಯನ್ನು ಪಡೆದೆ; ನಿನ್ನ ಈ ಜೀವನದ ಮಟ್ಟಿಗೆ ಇದೇ ಯಥೇಷ್ಟ. ಈಗ ಅವರ ಆರೋಗ್ಯ ಇಷ್ಟೊಂದು ಕೆಟ್ಟುಹೋಗಿರುವಾಗ, ಅವರು ಹೇಗೆ ನಿನ್ನೊಂದಿಗೆ ಮಾತನಾಡು ವರು? ಅವರು ಎಷ್ಟೊಂದು ದುರ್ಬಲರಾಗಿದ್ದಾರೆ ಎಂದರೆ, ಅವ ರಿಗೆ ಮಾತನಾಡಲೂ ಶಕ್ತಿಯಿಲ್ಲ! ಅವರು ಗುಣಮುಖರಾಗಿ ಎದ್ದು ಕುಳಿತರೆ, ಅವರ ಬಾಯಿಯಿಂದ ಮಾತನ್ನು ಕೇಳಬಲ್ಲೆ. ಮಹಾ ಪುರುಷರ ಈ ಶುಭೇಚ್ಛೆಯು ಅಲೌಕಿಕವಾದ ಒಂದು ರೀತಿಯಲ್ಲಿ ಅಕ್ಷರಶಃ ಸತ್ಯವಾಗಿಬಿಟ್ಟಿತು.

ಶ್ರೀಮಾತೆಯವರು ದೇಹತ್ಯಾಗ ಮಾಡುವ ದಿನ ರಾತ್ರಿ ತಮ್ಮ ಜ್ಯೋತಿರ್ಮಯವಾದ ದಿವ್ಯದೇಹದೊಂದಿಗೆ ನನಗೆ ಅಂತಿಮ ಆಶೀ ರ್ವಾದ ಮಾಡಿದರು. ಅಂದು ಜುಲೈ ೨೦, ೧೯೨೦. ಎಂದಿನಂತೆ ನಾನು ಅಂದೂ ನಿದ್ರಿಸಲೆಂದು ಮಲಗಿಕೊಂಡೆ. ರಾತ್ರಿ ಸುಮಾರು ಒಂದೂವರೆ ಗಂಟೆಯ ಹೊತ್ತಿಗೆ ಅದ್ಭುತವೆಂಬಂತೆ ಶ್ರೀಮಾತೆಯವರ ದರ್ಶನವನ್ನು ಹೊಂದಿದೆ. ಆ ದರ್ಶನ ಅಸಾಧಾರಣವಾಗಿತ್ತು. ಆಗ ಶ್ರೀಮಾತೆಯವರನ್ನು ನಾನು ಜ್ಯೋತಿರ್ಮಯೀ ಮೂರ್ತಿಯನ್ನಾಗಿ ಕಂಡೆ. ಶ್ರೀಮಾತೆ ನನ್ನತ್ತ ಪ್ರೀತಿಯಿಂದ ನೋಡುತ್ತಿದ್ದರು. ಮಧುರ ಧ್ವನಿಯಿಂದ ನನ್ನನ್ನು ಕರೆದು, ''ಮಗೂ, ನಾನು ಹೋಗುತ್ತಿದ್ದೇನೆ'' ಎಂದರು. ಈ ಅದ್ಭುತ ದರ್ಶನದ ಅರ್ಥವೇನೆಂದು ನನಗೆ ಆಗ ಸ್ವಲ್ಪವೂ ತಿಳಿಯಲಿಲ್ಲ. ಶ್ರೀಮಾತೆಯವರು ದೇಹತ್ಯಾಗ ಮಾಡಿದ ವಾರ್ತೆ ಲಭಿಸಿದಾಗಲೇ ನನಗದು ತಿಳಿಯಿತು. ಸುಮಾರು ಆ ಸಮಯದಲ್ಲೇ ಶ್ರೀಮಾತೆ 'ಉದ್ಬೋಧನ' ದಲ್ಲಿ ತಮ್ಮ ಕಳೇಬರವನ್ನು ತ್ಯಜಿಸಿದ್ದರು – ಆಗಲೇ ನನಗೆ ಅವರ ದರ್ಶನವಾಗಿತ್ತು. ✳

***(ಮುಗಿಯಿತು)***

*(ಮೂಲ: **'ಶತರೂಪೇ ಶಾರದಾ'** ಬಂಗಾಳಿ ಗ್ರಂಥ, ರಾಮಕೃಷ್ಣ ಮಿಷನ್ ಇನ್‌ಸ್ಟಿಟ್ಯೂಟ್ ಆಫ್ ಕಲ್ಚರ್, ಕಲ್ಕತ್ತಾ, ೧೯೮೫, ಪರಿಶಿಷ್ಟ.)*

## ಶ್ರೀಮಾತೆಯವರ ಅಹೇತುಕ ಪ್ರೀತಿ

ನವಾಸನದ ಒಬ್ಬ ಯುವಕ ಶ್ರೀಮಾತೆಯವರಿಂದ ಮಂತ್ರದೀಕ್ಷೆ ಪಡೆದಿದ್ದ. ಒಳ್ಳೆಯ ಕುಟುಂಬದಿಂದ ಬಂದವನು; ವಿದ್ಯಾವಂತ. ಅನೇಕ ಒಳ್ಳೆಯ ಗುಣಗಳೂ ಅವನಲ್ಲಿದ್ದವು. ದುರದೃಷ್ಟವಶಾತ್ ದಾರಿತಪ್ಪಿದ; ಕೆಟ್ಟ ಕೆಲಸಗಳಲ್ಲಿ ನಿರತನಾದ. ಹಾಗಿದ್ದರೂ ಅವನಿಗೆ ಶ್ರೀಮಾತೆಯವರ ಮೇಲಿದ್ದ ಭಕ್ತಿ, ಗೌರವಗಳು ಕಡಿಮೆಯಾಗಲಿಲ್ಲ. ಮೊದಲಿನಂತೆಯೇ ಅವರ ಬಳಿಗೆ ಬಂದು ಹೋಗುತ್ತಿದ್ದ. ಇತರ ಅನೇಕ ಭಕ್ತರುಗಳಿಗೆ ಇದು ಸರಿಕಾಣಲಿಲ್ಲ. ಈ ಕುರಿತು ಶ್ರೀಮಾತೆಗೆ ಹೇಳಿ, ಅವನು ಇನ್ನು ಮುಂದೆ ತಮ್ಮ ಬಳಿಗೆ ಬಾರದಂತೆ ಹೇಳಲು ಅವರೆಲ್ಲ ಒತ್ತಾಯಿಸಿದರು. ಶ್ರೀಮಾತೆ ಆ ಯುವಕನ ವಿಷಯವಾಗಿ ನೊಂದುಕೊಂಡರು ನಿಜ; ಆದರೆ ಆ ಭಕ್ತರ ಮುಂದೆ ನೇರವಾಗಿ ಹೇಳಿದರು: ''ನಾನು ಹಾಗೆ 'ನನ್ನ ಬಳಿ ಬರಬೇಡ' ಎಂದು ಹೇಳಲಾರೆ. ನಾನು ತಾಯಿಯಾಗಿ, ನನ್ನ ಮಗನಿಗೆ 'ಬರಬೇಡ' ಎಂಬ ಮಾತು ನನ್ನ ಬಾಯಿಯಿಂದ ಬರಲಾರದು.'' ಆ ಹುಡುಗ ಶ್ರೀಮಾತೆಯವರ ಬಳಿಗೆ ಬರುವುದನ್ನು ನಿಲ್ಲಿಸಲಿಲ್ಲ. ಶ್ರೀಮಾತೆಗೆ ಅವನ ಮೇಲಿದ್ದ ಪ್ರೀತಿ, ವಾತ್ಸಲ್ಯಗಳೂ ಕಡಿಮೆಯಾಗಲಿಲ್ಲ. ಯುವಕನ ಅಚಲ ಭಕ್ತಿ, ಶ್ರದ್ಧೆಗಳು ಮುಂದೆ ಫಲ ಕೊಟ್ಟವು. ಆತ ತನ್ನ ಕೆಟ್ಟ ಕೆಲಸಗಳಿಗಾಗಿ ಪಶ್ಚಾತ್ತಾಪ ಪಟ್ಟ, ಕ್ರಮೇಣ ಸರಿದಾರಿಗೆ ಬಂದ.

**– ಸ್ವಾಮಿ ಶಾರದೇಶಾನಂದ**

*(ಶ್ರೀಮಾತೆಯವರ ನೇರ ಶಿಷ್ಯರು, ಅವರ **'ಶ್ರೀ ಶ್ರೀ ಮಾಯೇರ್ ಸ್ಮೃತಿಕಥಾ'** ಗ್ರಂಥದಿಂದ)*




# ಸ್ವಾಮಿ ಅಖಂಡಾನಂದರ ಸ್ಮೃತಿಸಂಚಯ

ಬಂಗಾಳಿ ಮೂಲ: **ಸ್ವಾಮಿ ನಿರಾಮಯಾನಂದ** ಕನ್ನಡಕ್ಕೆ: **ಕುಮಾರಿ ಪಿ.ಉಷಾ**

ಭಾಗ ೧೫

**೫ ಜನವರಿ, ೧೯೩೭:** ಶ್ರೀ ಶ್ರೀ ಠಾಕೂರರ ಮಂಗಳಾರತಿ ಹಾಗೂ ಭಜನೆಯ ನಂತರ ಎಲ್ಲರೂ ಬಾಬಾಗೆ ಪ್ರಣಾಮ ಮಾಡಲು ಹೋದಾಗ, ಅವರು ಆಗಲೇ ಕುರ್ಚಿಯಲ್ಲಿ ಕುಳಿತಿದ್ದುದನ್ನು ನೋಡಿದರು. ಅವರಿಗೆ ಪ್ರಣಾಮ ಸಲ್ಲಿಸಿ ಎದ್ದಾಗ ಬಾಬಾ ಕೇಳಿದರು, ''ನಿನ್ನೆ ಹೇಗಿತ್ತು?'' ಅದಕ್ಕೆ ಭಕ್ತರೆಂದರು, ''ರಾತ್ರಿಯೆಲ್ಲ ನಿಮಗೆ ಎಷ್ಟೊಂದು ಕಷ್ಟವಾಯಿತು!'' ಬಾಬಾ, ''ಅರೆ, ನನಗೇನಾದರೂ ಕಷ್ಟವಾಗಿದ್ದರೆ ಮೊದಲೇ ಹೋಗಿ ಮಲಗಿಬಿಡುತ್ತಿದ್ದೆ. ನಿಜ ಹೇಳುವುದಾದರೆ, ಆಗ ನನಗೆ ದೇಹಭಾವವಿರಲಿಲ್ಲ. ಚೆನ್ನಾಗಿದ್ದೆ, ಕಾಯಿಲೆ, ನೋವು - ಎಲ್ಲವನ್ನೂ ಮರೆತಿದ್ದೆ. ಆಮೇಲೆ ಎಲ್ಲವೂ ಮರುಕಳಿಸಿದವು'' ಎಂದರು.

ಬೆಳಗ್ಗೆ 'ಸ್ಮೃತಿಕಥೆ'ಯನ್ನು ಬರೆಸುವಾಗ ಅವರು ಖೇತ್ರಿಯ ಅನೇಕ ವಿಷಯಗಳನ್ನು ಹೇಳಿದರು. ಅಲ್ಲಿನ ಕ್ರೀತದಾಸರ ಪಾಠಶಾಲೆ, ಪ್ರಜೆಗಳು ರಾಜನ ದರ್ಶನ ಪಡೆಯುವ ವ್ಯವಸ್ಥೆ ಇವುಗಳ ಬಗ್ಗೆ ಹೇಳಿ ಕೊನೆಗೆಂದರು, '' 'ಸ್ಮೃತಿಕಥೆ'ಗೆ ಖೇತ್ರಿರಾಜನ ಒಂದು ಭಾವಚಿತ್ರ ಇರಬೇಕು. ಆದರೆ ಅದೆಲ್ಲಿ ಸಿಗುತ್ತದೆ?'' ಕಲ್ಕತ್ತೆಯ ಹ್ಯಾರಿಸನ್ ರಸ್ತೆಯ ಫುಟ್‌ಪಾತ್‌ನಲ್ಲಿ ಹಳೆಯ ಪುಸ್ತಕಗಳ ರಾಶಿಯಲ್ಲಿ ಒಂದು ಹಿಂದೀ ಪುಸ್ತಕದಲ್ಲಿ 'ಸ್ವಾಮಿ ವಿವೇಕಾನಂದ ಹಾಗೂ ಖೇತ್ರಿ ರಾಜ' ಚಿತ್ರವನ್ನು ನೋಡಿದ್ದಾಗಿ, ಅದರಲ್ಲಿ ಈ ಚಿತ್ರ ಇದ್ದುದಾಗಿ ಒಬ್ಬ ಭಕ್ತ ಹೇಳಿದ. ತಕ್ಷಣ ಬಾಬಾ, ''ಯಾರಿಗಾದರೂ ಪತ್ರ ಬರೆ, ಅವರು ಅದನ್ನು ಕಳುಹಿಸಿಕೊಡುತ್ತಾರೆ'' ಎಂದರು. ಅಂತೆಯೇ ಪತ್ರವನ್ನು ಬರೆದದ್ದಾಯಿತು, ಆ ಪುಸ್ತಕವೂ ಬಂತು.

ಸಂಜೆ ಬಾಬಾ ಹೇಳುತ್ತಿದ್ದಾರೆ, ''ಶರಣಾಗತ, ಶರಣಾಗತ. 'ಶರಣಾಗತ' ಎಂದರೆ '**ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ।**' ಸರ್ವವನ್ನೂ ತ್ಯಾಗ ಮಾಡದಿದ್ದರೆ ಶರಣಾಗತಿ ಬರುವುದಿಲ್ಲ. ಶರಣಾಗತಿ ಬಂದರೆ ಎಲ್ಲವೂ ಆದಂತೆಯೆ.

**ಜೋ ಮಾಕೋ ಶರಣ ಲಿಯೇ ಸೋ ತಾಕೋ ರಾಖೇ ಲಾಜ್।**
**ಉಲಟ್ ಜಲೇ ಮಛಲೀ ಚಲೇ ಬಹಿ ಜಾಯ್ ಗಜರಾಜ॥**

*('ಜಗನ್ಮಾತೆಯಲ್ಲಿ ಶರಣಾದವನನ್ನು ಆಕೆ ರಕ್ಷಿಸುತ್ತಾಳೆ. ವಿಮುಖವಾಗಿ ಹರಿಯುವ ಜಲಪ್ರವಾಹದಲ್ಲಿ ತನ್ನ ಶಕ್ತಿಯನ್ನೇ ನೆಚ್ಚಿಕೊಂಡ ಆನೆಯು ಕೊಚ್ಚಿಕೊಂಡು ಹೋಗುತ್ತದಾದರೂ ಮೀನು ಅದರಲ್ಲಿ ಸಹಜವಾಗಿಯೇ ಈಜುತ್ತದೆ.')* ಇವೆಲ್ಲ ಸುಮ್ಮನೆ ಆಗದು. ಸಾಧುಸಂಗ ಅಗತ್ಯ.

**ದಯಾ ಧರಮ್ ಕೀ ಮೂಲ ಹೈ, ನರಕ ಮೂಲ ಅಭಿಮಾನ್।**
**ತುಲಸೀ ದಯಾ ನ ಛೋಡಿಯೇ ಜಬ್ ಕಂಠಾಗತ ಪ್ರಾಣ್॥**



''*('ದಯೆಯೇ ಧರ್ಮದ ಮೂಲ; ನರಕಕ್ಕೆ ಮೂಲ ಅಹಂಕಾರ. ಪ್ರಾಣವನ್ನು ಕಳೆದುಕೊಳ್ಳುವ ಸಂದರ್ಭದಲ್ಲೂ ದಯೆಯನ್ನು ಬಿಡಬಾರದೆಂಬುದೇ ತುಲಸೀದಾಸನ ಅಭಿಪ್ರಾಯ.')* ಈ 'ದಯೆ' ಯೆಂಬುದು ಹೇಗೆ ಲಭಿಸುವುದು?

**ತುಲಸೀ ಯೇ ಜಗಮೇ ಪಾಂಚೋ ರತನ ಹೈ ಸಾರ್ ।**
**ಸಾಧು-ಸಂಗ, ಹರಿಕಥಾ, ದಯಾ ದೀನ, ಉಪಕಾರ್ ॥**

''ಸಾಧುಸಂಗದಿಂದಲೇ ಹರಿಕಥೆ (ಭಗವತ್ಪ್ರಸಂಗ), ಹರಿಕಥೆಯಿಂದ ದಯೆ, ದೈನ್ಯತೆ; ಆ ದಯೆಯಿಂದ ಧರ್ಮ. ಅಂದರೆ, ದಯೆಯೇ ಧರ್ಮದ ಮೂಲ. ದಯೆಯ ಮೂಲ ಹರಿಕಥೆ, ಹಾಗೂ ಹರಿಕಥೆಯ ಮೂಲ ಸಾಧುಸಂಗ.''

**೬ ಜನವರಿ, ೧೯೩೭:** ಸಂಜೆಯ ಹೊತ್ತಿಗೆ ಎಲ್ಲರೂ ಬಂದ ಕೂಡಲೇ ಬಾಬಾ ಹೇಳಿದರು: '' 'Be active, at the same time sensible.' *('ಕಾರ್ಯತತ್ಪರರಾಗಿರಿ, ಜೊತೆಗೆ ಸಂವೇದನಾಶೀಲರಾಗಿಯೂ ಇರಿ')*. ಠಾಕೂರರು ನಮ್ಮನ್ನು ಅದೇನೇ ಮಾಡಿ

ರಲಿ, ಮಾಡದಿರಲಿ, ಬಹಳ ಶಕ್ತರನ್ನಾಗಿ ಮಾಡಿದ್ದಾರೆ, ಎಂದೂ ನಿಶ್ಶಕ್ತರನ್ನಾಗಿ ಮಾಡಲಿಲ್ಲ. ನಿದ್ರೆ ಎಂಬುದು ಶಕ್ತಿಹೀನ ಅವಸ್ಥೆ, ಚೈತನ್ಯಶೂನ್ಯರಾಗಿರುವುದು. ಈ ಶರೀರದ ಬಗ್ಗೆ ಅದೆಷ್ಟು ಕಾಳಜಿ ವಹಿಸುತ್ತೇವೆ! ನಿದ್ರಿಸಿದಾಗ ಬಾಯಲ್ಲಿ ನಾಯಿ ಮೂತ್ರ ಮಾಡಿದರೂ ಅದರ ಅರಿವು ನಮಗಾಗದು! ಹೌದು ತಾನೆ?

''ಏನು! ಮತ್ತೆ ಆ ದಿನದಂತೆಯೇ ಆಗುವುದೆ? ನಿಮಗಾಗದು, ಘಂಟೆ ಹೊಡೆದರೆ ಸಾಕು, ಎದ್ದು ಬಿಡುತ್ತೀರಿ! ಭಗವಂತನನ್ನು ಸಮಯ ನೋಡಿಕೊಂಡು ಪ್ರಾರ್ಥಿಸುತ್ತಾರೇನು? ಕಾಲವಾದರೊ relative (ಸಾಪೇಕ್ಷ). ಮೂರು, ನಾಲ್ಕು ಹಾಡುಗಳನ್ನು ಹಾಡಿ ನೋಡೋಣ!''

**'' ನಿಬಿಡ ಆಂಧಾರೆ ಮಾತೋರ್ ಚಮಕೇ ಅರೂಪರಾಶಿ।**
**ತಾಯ್ ಜೋಗಿ ಧ್ಯಾನ ಧರೆ ಹೊಯೇ ಗಿರಿಗುಹವಾಸಿ॥**

*(ಮಿರುಗುತಿದೆ ನಿನ್ನ ಅಪರೂಪ ರಾಶಿ । ನಿಬಿಡಾಂಧಕಾರದಲ್ಲಿ । ನಿನ್ನನದರಿಂದಲೇ ನೆನೆವರೌ ಯೋಗಿಗಳು ಗಿರಿಗುಹೆಗಳಲ್ಲಿ ॥)*

''ಇದು ಬ್ರಹ್ಮಸಮಾಜದ ಹಾಡು. ಅವರು ಕೊನೆಯವರೆಗೆ ಭಾವವನ್ನು ಉಳಿಸಿಕೊಳ್ಳಲಾರರು. ಇಲ್ಲಿ ನೋಡಿ ಹೀಗಿದೆ ಹಾಡು:

**ಮಾ ತೊರ್ ಕೊಲೆ ಆಮಿ ಲುಕಿಯೆ ಥಾಕಿ।**
**ಥೇಕೆ ಥೇಕೆ ಚೇಯೆ ಚೇಯೆ**
**ಚೇಯೆ ಚೇಯೆ ತೊರ್ ಮುಖಪಾನೆ।**
**ಮಾ ಮಾ ಬೊಲೆ ಡಾಕಿ ॥**

''*('ನಿನ್ನೊಲವಿನ ಮಡಿಲೊಳಡಗಿ, ನಿನ್ನೆಡೆಗೇ ಕಣ್ಣ ಚಾಚಿ, ಓ ತಾಯಿ, ಎನ್ನುವೆ')*. ಇದಾದ ನಂತರ 'ಯೋಗಾನಂದ ನಿದ್ರಾರಸ' ಎಂದಿದೆ. *('ಚಿದಾನಂದ ರಸಧಿಯಲ್ಲಿ । ಮಹಾಯೋಗ ನಿದ್ರೆಯಲ್ಲಿ')* ಇದೇನು! ಚಿಕ್ಕ ಮಗು ತಾಯಿಯ ಮಡಿಲಲ್ಲಿ ಆನಂದ ದಿಂದಿದೆ. 'ಅಮ್ಮಾ', 'ಅಮ್ಮಾ' ಎಂದು ಕರೆದರೆ ಅದೆಂಥ ಆನಂದ! ಅದರ ಮಧ್ಯದಲ್ಲಿ 'ಯೋಗಾನಂದ ನಿದ್ರಾರಸ' ಎಂಬ ಪದಗಳನ್ನು ಏಕಾದರೂ ಸೇರಿಸಿದ್ದಾರೊ?''

ಮತ್ತೆ ಹಾಡುಗಳು ಆರಂಭವಾದವು :

**ಬೋಲ್ ರೇ ಜಬಾ ಬೋಲ್**
**ಕೊನ್ ಸಾಧನಾಯ್ ಪೆಲೀಯೆ ತುಯಿ**
**ಶ್ಯಾಮಾ ಮಾಯೆರ್ ಚರಣತಲ್**

*('ಎಲೆ ದಾಸವಾಳದ ಹೂವೆ, ಯಾವ ಸಾಧನೆಯಿಂದ ಜಗನ್ಮಾತೆಯ ಚರಣತಲದ ಪುಣ್ಯವ ನೀ ಪಡೆದೆ, ಹೇಳು.')*

ಒಬ್ಬಿಬ್ಬರ ಜತೆ ಬಾಬಾ ಹಾಡುತ್ತಿದ್ದಾರೆ:

**ರಾಂಗಾ ಜಬಾ ಕೇ ದಿಲೋ ತೋರ್ ಪಾಯ್**
**ಮುಠೋ ಮುಠೋ।**
**ದೇ ನಾ ಮಾ ಸಾಧ್ ಹೊಯೆಛೆ ಪೊರಿಯೆ ದೇನಾ**
**ಮಾಥಾಯ್ ದುಟೊ**

*(ರಂಗುರಂಗಿನ ಹೂವನಾರಿಟ್ಟರಮ್ಮಾ ನಿನ್ನ ಮುಡಿಗೆ? ಅವುಗಳೆರಡನ್ನು ಇಡಬಾರದೇ ನೀನೆನ್ನ ಮುಡಿಗೆ!)*

ನಿನ್ನೆ ಹಾಡಿದ ಗಾಯಕ ಭಕ್ತ ಹಾಡಿದ :

**೧) ಕಾಲೋ ಮೇಯೇರ್ ಪಾಯೇರ್ ತಲಾಯ್**
**ದೇಖೇ ಜಾ ಆಲೋರ್ ನಾಚನ್ ।**
**ರೂಪ್ ದೇಖೇ ದೇಯ್ ಬುಕ್ ಪೇತೇ ಶಿವ್**
**ಜಾರ್ ಹಾತೇ ಮರಣ-ಬಾಚನ್॥**

*(ಜಗನ್ಮಾತೆಯ ಪಾದದಡಿ ಬೆಳಕಿನ ನರ್ತನವ ನೋಡಿ ಆ ಕಾಲಶಿವನು ತನ್ನ ಎದೆಯನೊಡ್ಡಿ ಮಲಗಿಹನಲ್ಲಿ..)*

**೨) ಬುಕೇರ್ ವ್ಯಥಾಯ್ ಆಸನ್ ಪಾತಾ**
**ಬಸ್ ಮಾ ಹೆಥಾ ದುಃಖ-ದುಲಾಲೀ।**
**ಆರ್ ಲುಕಾಬಿ ಕೊಥಾ ಮಾ ಕಾಲೀ ॥**

*(ವ್ಯಥೆಗೊಂಡ ಹೃದಯದಲಿ ನಿನಗಾಗಿ ಆಸನವ ಹಾಸಿರುವೆ; ಬಂದು ನೆಲೆಸಮ್ಮಾ ತಾಯಿ, ದುಃಖದಲಿ ನೀ ಹೋಗುವೆಯೆಲ್ಲಿಗೆ?)*

ಬಾಬಾ ಮೌನವಾಗಿ ಹಾಡನ್ನಾಲಿಸಿ ಕೊನೆಗೆ, ''ಏನು ಸೊಗಸಾದ ಪದಗಳನ್ನೊಳಗೊಂಡ ಹಾಡು, ಭಾವವೂ ಅದೇ ರೀತಿ!'' ಎಂದರು. ಇದಾದ ನಂತರ ಮತ್ತೊಬ್ಬ ಹಾಡಲಾರಂಭಿಸಿದ, **'ಏಯ್ ಜೇ ದೇಖಾ ಜಾಯ್ ಆನಂದಧಾಮ್ । ಭವಜಲಧಿರ್ ಪಾರೇ ಜೋತಿರ್ಮಯ್'** *(ಭವಜಲದ ಆ ತೀರದಲ್ಲಿ ಜೋತಿರ್ಮಯವಾದ ಆನಂದಧಾಮವು ಗೋಚರಿಸುತ್ತಿದೆ)* ಸ್ವರ-ತಾಳ-ಲಯ ಸೇರಿಸಿ ಎಲ್ಲರೂ ಒಂದಾಗಿ, ಏಕಕಂಠದಿಂದ ಹಾಡಿದ ಈ ಹಾಡು ಅತ್ಯಂತ ಭಾವಪೂರ್ಣವಾಗಿತ್ತು. ಸ್ವಲ್ಪ ಸಮಯದ ಬಳಿಕ ಮೌನ ಮುರಿದು ಬಾಬಾ ನಿಧಾನವಾಗಿ ಹೇಳಿದರು: ''ಈ ಹಾಡಿನ association (ಸಂಬಂಧ) ಬಹಳ ಕರುಣಾಪೂರಿತವಾದುದು. ಅಂತಿಮ ಸಮಯ ದಲ್ಲಿ ಮಹಾರಾಜ್ (ಸ್ವಾಮಿ ಬ್ರಹ್ಮಾನಂದರು) ನನ್ನನ್ನು ಹುಡುಕುತ್ತಿದ್ದರು. 'ಅವನಿನ್ನೂ ಬಂದಿಲ್ಲವೆ?' ಎಂದು ಕೇಳಿದ್ದರು. ನಾನು ಹೋದಾಗ ಈ ಹಾಡನ್ನು ಹಾಡುತ್ತಿದ್ದರು. ಮೃತ್ಯುವು ದುಃಖಕರ ವಲ್ಲ , ಆನಂದದಾಯಕ; ಅಲ್ಲದೆ ಭಗವಂತನ ಸಾಮೀಪ್ಯ ಎಂದು ಅದರ ಭಾವ. ಶರತ್ ಮಹಾರಾಜರ (ಸ್ವಾಮಿ ಶಾರದಾನಂದ)ಕಾಲ ದಲ್ಲಿ ರಾತ್ರಿ ೨ ಗಂಟೆಯಿಂದ ಮುಂಜಾನೆಯವರೆಗೆ ಈ ಹಾಡನ್ನು ಹಾಡುತ್ತಿದ್ದರು. ಹರಿ ಮಹಾರಾಜರ (ಸ್ವಾಮೀ ತುರೀಯಾನಂದ) ಕಾಲದಲ್ಲೂ ಈ ಹಾಡು. ಇದು ನಮಗೆಲ್ಲ ಪ್ರಿಯವಾದ ಹಾಡು.''

**೭ ಜನವರಿ, ೧೯೩೭:** ಒಬ್ಬಾಕೆ ಮಹಿಳೆ ಬಾಬಾಗೆ ಪತ್ರವನ್ನು ಬರೆದು, ಎಲ್ಲದರ ಭಾರವನ್ನೂ ಭಗವಂತನ ಮೇಲೆ ವಹಿಸಿ ಮುಂದುವರಿಯುವ ಇಚ್ಛೆಯನ್ನು ವ್ಯಕ್ತಪಡಿಸಿದ್ದಾರೆ. ಪತ್ರವನ್ನು ಓದಿಸಿ ಕೇಳಿದ ಬಾಬಾ ಬಹಳ ಸಂತೋಷಗೊಂಡು ಅದಕ್ಕೆ ಹೀಗೆ ಉತ್ತರ ಬರೆಯಲು ಹೇಳಿದರು: ''ನೀನು ಎಲ್ಲವನ್ನೂ ಠಾಕೂರರ ಕೈಗೊಪ್ಪಿಸಬೇಕೆಂದಿರುವೆ. ಆತನ ಇಚ್ಛೆಯಿಂದ ನಿನ್ನ ಈ ಇಚ್ಛೆ ಈಡೇ ರಲಿ. ಗೀತೆಯಲ್ಲಿ ಭಗವಂತನು ಅರ್ಜುನನಿಗೆ ಹದಿನೇಳು ಅಧ್ಯಾಯ ಗಳಲ್ಲಿ ಸಾಂಖ್ಯ, ಜ್ಞಾನ, ಕರ್ಮ, ಭಕ್ತಿಯೋಗಗಳನೆಲ್ಲ ಉಪದೇಶಿಸಿ,

೧೮ನೇ ಅಧ್ಯಾಯದ ಕೊನೆಗೆ ಹೇಳುತ್ತಾನೆ, **'ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ,'** ಎಂಬುದಾಗಿ. 'ಶರಣಾಗತಿ' ಗಿಂತ ಹಿರಿದು ಬೇರೇನೂ ಇಲ್ಲ.'' ಪತ್ರ ಬರೆದ ನಂತರ ಭಕ್ತನ ಕಡೆಗೆ ತಿರುಗಿ, ''ಶರಣಾಗತ, ಶರಣಾಗತ – ಇದೂ ಒಂದು ಮಂತ್ರವೇ ಸರಿ. ಠಾಕೂರರು ಇದನ್ನು ಎಷ್ಟೊಂದು ಬಾರಿ ಹೇಳಿದ್ದಾರೆ!''

ಭಕ್ತ ತಾನು ಬಹಳ ಧನ್ಯ ಎಂದೆಣಿಸಿದ. ಅನೇಕ ದಿನಗಳ ಹಿಂದೆ ಅವನು ಗೀತಾಪಠಣದ ಬಗ್ಗೆ ಬಾಬಾ ಅವರನ್ನು ಕೇಳಿದ್ದಾಗ, ಅವರು ಗೀತೆಯ ಅರ್ಥವನ್ನು ಹೇಳುವುದಾಗಿ ಹೇಳಿದ್ದರು. ಅದು ಹೀಗೆ ನೆರವೇರುವುದೆಂದು ಭಕ್ತನು ಭಾವಿಸಿರಲಿಲ್ಲ. ಆದ್ದರಿಂದ ಅವನಿಗೆ ಅತ್ಯಾನಂದವಾಯಿತು. ಈ ವಿಷಯವಾಗಿ ಇನ್ನೊಂದು ಮಾತು ಹೇಳಿದರೆ ತಪ್ಪಾಗದು – ಬಾಬಾ ದೀಕ್ಷೆಗೆ 'ಶರಣಾಗತಿ' ಎಂದೂ ದೀಕ್ಷೆ ಪಡೆದವನಿಗೆ 'ಶರಣಾಗತ'ನೆಂದೂ ಹೇಳುತ್ತಿದ್ದರು.

**೮, ಜನವರಿ, ೧೯೩೭:** ಸಂಜೆ ಎಲ್ಲರೂ ಬಂದು ಸೇರಿದ್ದಾರೆ. ಕುಮಿಲ್ಲಾದ ಡಾ. ಕಾಮಿನೀಬಾಬು ಸಹ ಇದ್ದಾರೆ. ಅವರು ಇತ್ತೀಚೆಗೆ ಸಾಧುಸಂಗ ಪಡೆಯಲು ಅಲ್ಲಿಲ್ಲಿ ಹೋಗುತ್ತಿದ್ದಾರೆ. ಆದ್ದರಿಂದ ಬಾಬಾ ಅವರಿಗೆ ಎಚ್ಚರಿಕೆಯನ್ನು ನೀಡಿದರು, ''ಸಾಧುಸಂಗ ಮಾಡುವಾಗ ಬಹಳ ಎಚ್ಚರಿಕೆಯಿಂದಿರಬೇಕು. ಸಾಧುಗಳನ್ನು ಗುರುತಿಸುವುದು ಬಹಳ ಕಠಿಣ. ಯಾರಾರೋ ಸಾಧುಗಳೊಂದಿಗೆ ಬೆರೆಯಬೇಡ, ಅದರಿಂದ ಹಾನಿಯಾಗುವುದು. ಜಯಪುರದಲ್ಲಿ ಸಾಧುವೊಬ್ಬ ಜಿಪುಣನೊಬ್ಬನ ಬಳಿಗೆ ಬಂದು ೩೦೦ ರೂ. ಗಳನ್ನು ೭೦೦ ರೂ. ಮಾಡಿಕೊಡುವೆನೆಂದು ಹೇಳಿ ಹಣವನ್ನು ಲಪಟಾಯಿಸಿದ. ಜಿಪುಣನೋ ಹಣ ಸುಮ್ಮನೆ ಕೊಡಲಿಲ್ಲ. ಕೊನೆಗೆ ಬ್ರಾಹ್ಮಣರ ಭೋಜನಕ್ಕೆಂದು ಸ್ವಲ್ಪ ಹಣ ಬಿಚ್ಚಿದ. ಸಾಧು ೭೦೦ ರೂ. ಮತ್ತೆ ಕೊಡಲಿಲ್ಲ. ಜಿಪುಣ ೮೦ ಅಡಿ ಆಳದ ಬಾವಿಯಲ್ಲಿ ಬಿದ್ದು ಸತ್ತ. ಸಾಧುವನ್ನು ಕರೆದು ವಿಚಾರಣೆ ನಡೆಸಲಾಯಿತು. ಸಾಧುವಾದ್ದರಿಂದ ಗಲ್ಲಿಗೇರಿಸಲಿಲ್ಲ, ಎರಡು ವರ್ಷ ಜೈಲುವಾಸವಾಯಿತು.

''ಬದರಿ ಸಮೀಪ ಜಿಪುಣನೊಬ್ಬ ಏನೇ ಆದರೂ ಸಾಧುಗಳಿಗೆ ಭೋಜನ ನೀಡುತ್ತಿರಲಿಲ್ಲ. ಕೊನೆಗೆ ಕಟ್ಟುಮಸ್ತಾದ ಸಾಧುವೊಬ್ಬ ಬಂದು, 'ಮೂರು ದಿನದಲ್ಲಿ ನಿನ್ನ ಬೆಳ್ಳಿಯ ನಾಣ್ಯಗಳನ್ನೆಲ್ಲ ಚಿನ್ನವಾಗಿ ಮಾಡುತ್ತೇನೆ' ಎಂದಾಗ ಜಿಪುಣ ಅವನಿಗೆ ತುಂಬ ಹಣ ಕೊಟ್ಟ. ಈ ಸಾಧು ಮಾಡಿದ್ದೇನು! ಅಲ್ಲಿದ್ದ ಸಾಧುಗಳಿಗೆಲ್ಲ, 'ಇಂಥ ದಿನ ಇಂಥ ಕಡೆ ಸಾಧುಸೇವೆ ನಡೆಯುವುದು' ಎಂದು ಘೋಷಿಸಿದ. ಮೂರು ದಿನಗಳ ನಂತರ ಮಧ್ಯಾಹ್ನದ ಹೊತ್ತಿಗೆ ಆ ಜಿಪುಣ, ಸಾಧುವಿಗೆ ನೆನಪಿಸಿದ, 'ಚಿನ್ನವೆಲ್ಲಿ?' – ಆಗ ಸಾಧು ಅವನನ್ನು ಕರೆತಂದು ತೋರಿಸಿದ, 'ಇಲ್ಲಿ ನೋಡು, ನಿನ್ನ ಹಣದಿಂದ ಸಾಧು ಸೇವೆ ನಡೆಯುತ್ತಿದೆ, ಇದಕ್ಕಿಂತ ಬೇರೆ ಯಾವ ಚಿನ್ನ ಬೇಕು ನಿನಗೆ?'

''ಸಾಧುಗಳು ಮೊದಲಿಗೆ 'ಜೈ ರಾಮಕೃಷ್ಣ ಕೀ ಜೈ' ಎಂದು ಜಯಕಾರ ಮಾಡಿದರು. ಠಾಕೂರರ ಹೆಸರನ್ನು ಹೇಗೆ ಹೇಳುತ್ತೇವೆ, ನೋಡು! ನಂತರ ಜೈ ಜಾನಕೀ ಮಾಯಿ ಕೀ! ಜೈ ಅಯೋಧ್ಯಾ ಕೀ! ಸರಯೂ ಕೀ! ಲಛಮಣ್‌ಜೀ ಕೀ! ಭರತಜೀ ಕೀ! ಹನುಮಾನ್ ಕೀ! ಬಗಾನ್ ಕೀ! (ತೋಟಕ್ಕೆ ಜಯವಾಗಲಿ), ಝೋಪ್ ಕೀ, ಝಾಡ್ ಕೀ! (ಮರಗಿಡ, ಪೊದರುಗಳಿಗೆ ಜಯವಾಗಲಿ) ಇನ್ನೂ ಏನೆಲ್ಲಾ ಇದೆಯೋ ಅದಕ್ಕೆಲ್ಲ ಜೈಕಾರ!''(ಎಲ್ಲರೂ ಜೋರಾಗಿ ನಕ್ಕರು.)

**೯ ಜನವರಿ, ೧೯೩೭:** ಬಾಬಾ 'ಸ್ಮೃತಿಕಥೆ'ಯ ಬಗ್ಗೆ ಮಾತನಾಡುತ್ತಿದ್ದಾರೆ: ''ಮೂಲ ಪ್ರತಿಮೆಯ ಹಿನ್ನೆಲೆಯಲ್ಲಿ ಪ್ರಭಾವಳಿಯಿರುತ್ತದೆ; ನಡೆದ ಘಟನೆಯ ಹಿನ್ನೆಲೆಯಲ್ಲೂ ಅಂತೆಯೇ ನಾನಾ ವಿಷಯಗಳು, ಮಾತುಕತೆಗಳಿರುತ್ತವೆ. ಮೊದಮೊದಲು ಇವನ್ನೆಲ್ಲ ಬರೆಯುವುದು ಬೇಡವೆಂದುಕೊಂಡಿದ್ದೆ. ಆದರೆ ' —' ಹೇಳಿದ, ಯಾವುದು ತಾನಾಗಿಯೇ ನೆನಪಿಗೆ ಬರುತ್ತದೊ ಅವನ್ನೆಲ್ಲ ಬರೆಯಿರಿ, ಕೇವಲ serious ಆದರೆ ಚೆನ್ನಾಗಿರುವುದಿಲ್ಲ. ಬರಿಯ bare facts ಗಳಿಂದ repulsion ಉಂಟಾಗುತ್ತದೆ. ಆದರೆ ಇವುಗಳಿಂದ interest ಹೆಚ್ಚಾಗುತ್ತದೆ. ಸೇವಾಧರ್ಮದ ಬಗ್ಗೆ ಬರೆದಾದ ಬಳಿಕ ಪ್ರವಾಸಕಥನದೊಂದಿಗೆ ಕೊನೆಗೊಳಿಸಬೇಕು ಅಂದುಕೊಂಡಿದ್ದೇನೆ.''

ಒಬ್ಬನ ಪ್ರಶ್ನೆಗೆ ಬಾಬಾ ಉತ್ತರಿಸಿದರು: ''ಹೌದು, ಟಿಬೆಟ್ಟಿನಲ್ಲಿ ಮೂರು ವರ್ಷಗಳಿದ್ದರೂ ಅದು ಅಸಂಪೂರ್ಣವೆ.'' ಮತ್ತೊಬ್ಬರಿಗೆ ಹೇಳಿದರು, ''ಕಾಶೀಪುರದ ವಿಷಯ ನೆನಪಿಲ್ಲ.''

''ನಾವಂತೂ ಇಡೀ ಜೀವನ ಕಷ್ಟಪಟ್ಟಿದ್ದೇವೆ. ಮೊದಲು ಬಾರಾನಗರ ಮಠದಲ್ಲಿ , ನಂತರ ಹಿಮಾಲಯದ ಹಲವಾರು ತೀರ್ಥಸ್ಥಾನದಲ್ಲೂ ಕೂಡ. ಆಮೇಲೆ ರಜಪುತಾನ, ಕೊನೆಗೆ ಮುರ್ಷಿದಾಬಾದ್, ಇಲ್ಲೆಲ್ಲ ಕಷ್ಟಪಟ್ಟೆವು. ಆ ವಿಷಯಗಳನ್ನೆಲ್ಲಾ ನಾನಾಗಿಯೇ ಹೇಗೆ ಹೇಳಲಿ? ಕಷ್ಟದ ಮೂಲಕವೇ ಭಗವಂತನ ಬಳಿ ಇರಲು ಸಾಧ್ಯವೆಂದು ನಮಗೆಲ್ಲ ಗೊತ್ತು.''

**೧೧ ಜನವರಿ, ೧೯೩೭:** ಬೆಳಗ್ಗೆ ಬಾಬಾಗೆ ಪ್ರಣಾಮ ಮಾಡಲು ಬಂದ ಭಕ್ತರಿಗೆಲ್ಲ , ತಮಗೆ ಠಾಕೂರರಿಂದ ವಾಸಂತೀಪೂಜೆ ಮಾಡಬೇಕೆಂದು ಕನಸಿನಲ್ಲಿ ಆದೇಶ ಬಂದಿರುವ ವಿಷಯವನ್ನು ಅವರು ಗುಟ್ಟಾಗಿ ಹೇಳತೊಡಗಿದರು: ''ಬೆಳಗಿನ ಜಾವ ಕನಸು ಬಿತ್ತು– ಠಾಕೂರರು ಹೇಳಿದರು, 'ದುರ್ಗಾಪೂಜೆ ಮಾಡು' ಅಂತ. ನಾನಂದೆ, 'ದುರ್ಗಾಪೂಜೆಯೆ? ಅದಕ್ಕಿನ್ನೂ ಸಮಯವಿದೆ.' ಆಗ ಅವರೆಂದರು, 'ಹಾಗಾದರೆ ವಾಸಂತೀಪೂಜೆ ಮಾಡು.' ಅನಂತರ ನೋಡಿದೆ, ಬಕುಲವೃಕ್ಷದ ಅಡಿಯಲ್ಲಿ, ಹುಲ್ಲುಛಾವಣಿಯ ಕೆಳಗೆ ಜಗನ್ಮಾತೆಯ ಮೂರ್ತಿ ಪ್ರಜ್ವಲಿಸುತ್ತಿತ್ತು . ಠಾಕೂರರು ಇದನ್ನು ಮಹಡಿಯ ವರಾಂಡದಿಂದ ನೋಡುತ್ತಿದ್ದರು. ಎಷ್ಟೊಂದು ಜನ ಗುಲ್ಲೆಬ್ಬಿಸುತ್ತಿದ್ದಾರೆ, ಎಷ್ಟು ಜನ ಅಲ್ಲಿ ನೆರೆದಿದ್ದಾರೆ! ಜಗನ್ಮಾತೆಯ ಹೆಸರಿನಲ್ಲಿ ಅದೇನು ಆನಂದ!''

ಪೂಜೆಯ ವಿಷಯವಾಗಿ ಹೇಳಿದಾಗ ಎಲ್ಲರೂ ಸಂತೋಷಪಡುತ್ತಿದ್ದರು. ಆಗ ಬಾಬಾ ಹೇಳಿದರು, ''ಅರೆ, ನಾನು ಯಾವಾಗ ಇರುತ್ತೇನೋ, ಯಾವಾಗ ಇರುವುದಿಲ್ಲವೊ! ರಾತ್ರಿಹೊತ್ತು ಕಳೆದು ಹೋಗುತ್ತಿಲ್ಲ. ಮಹಾರಾಜ್ (ಸ್ವಾಮಿ ಬ್ರಹ್ಮಾನಂದರು) ವಾಸಂತೀ ಪೂಜೆ ಮಾಡುವುದಾಗಿ ಹೇಳಿದ್ದರು. ಆದರೆ ಅದು ಸಾಧ್ಯವಾಗಲಿಲ್ಲ. ಅಣ್ಣನೂ (ಸ್ವಾಮಿ ಶಿವಾನಂದರು) ಹಾಗೆಯೇ. ಈಗ ನೋಡು,

ನಾನೂ ಇನ್ನೆಷ್ಟು ದಿನ ಬದುಕಿರುತ್ತೇನೊ!'' ಆಗ ಎಲ್ಲರ ಮುಖವನ್ನೂ ಒಂದು ಗಂಭೀರ ಛಾಯೆ ಆವರಿಸಿತು.

ಸ್ವಲ್ಪ ನಂತರ ಬಾಬಾ ಮತ್ತೆ ಹೇಳುತ್ತಿದ್ದಾರೆ: ''ವಾಸಂತೀ ಪೂಜೆಯ ನಡುವೆಯೇ ಅನ್ನಪೂರ್ಣಾ ಪೂಜೆ. ೪೦ ವರ್ಷಗಳ ಹಿಂದೆ ಕ್ಷಾಮದ ದಿನಗಳಲ್ಲಿ ಇದೇ ದಿನದಂದು ನಾನಿಲ್ಲಿಗೆ ಬಂದಿದ್ದೆ. ಮಂದಿರದ ಪ್ರತಿಷ್ಠಾಪನೆ ಆದದ್ದೂ ಅದೇ ದಿನದಂದು. ಮೊದಲು ಹುಲ್ಲಿನ ಛಾವಣಿಯ ಮನೆಯಿಂದ ಠಾಕೂರರ ಚಿತ್ರಪಟವನ್ನು ತಂದು ಹುಡುಗರ ಆಟದ ಕೋಣೆಯಲ್ಲಿ ಇರಿಸಲಾಯಿತು. ನಂತರ ಮಂದಿರವನ್ನು ಕಟ್ಟಲಾಯಿತು, ಆದರೆ ಠಾಕೂರರ ಪ್ರತಿಷ್ಠಾಪನೆ ಆಗಲಿಲ್ಲ. ಧ್ಯಾನಿಸುವಾಗ ಠಾಕೂರ್ ಹಾಗೂ ನಾನು ಇಬ್ಬರೇ ಇರುವಂತೆ, ಈಗ ಆಲೋಚಿಸುತ್ತಿದ್ದೆ; ಠಾಕೂರರು ಹೇಳಿದಂತಾಯಿತು, 'ಶಿವರಾತ್ರಿಯ ನಂತರದ ದ್ವಿತೀಯೆಯ ದಿನದಂದು ನಾನು ಸಮಷ್ಟಿರೂಪದಲ್ಲಿ ಆವಿರ್ಭವಿಸಿದೆ, ವ್ಯಷ್ಟಿರೂಪದಲ್ಲಿ ಇಲ್ಲಿ ನಾನು ನಿನ್ನ ಬಳಿ ಅನ್ನಪೂರ್ಣೆಯಾಗಿದ್ದೇನೆ.' ಆದ್ದರಿಂದಲೇ ಅನ್ನಪೂರ್ಣೆಯ ಪೂಜಾದಿನದಂದು ಠಾಕೂರರ ಪ್ರತಿಷ್ಠಾಪನೆಯಾಯಿತು. ಏನಾಶ್ಚರ್ಯ! ಸರಿಯಾಗಿ ಆ ದಿನದಂದೇ ಠಾಕೂರರು ಮಂದಿರದಲ್ಲಿ ಬಂದು ಕುಳಿತರು.

**೧೨ ಜನವರಿ, ೧೯೩೭:** ಇಂದು ಪೌಷ ಮಾಸದ ವನಭೋಜನ. ಬೆಳಗ್ಗೆಯಿಂದಲೇ ಹುಡುಗರಿಗೆ ಓದು, ಬರಹಗಳಿಗೆ ರಜೆ. ಅವರು ಕೆರೆಯಲ್ಲಿ ಮೀನು ಹಿಡಿದು ತಂದಿದ್ದಾರೆ – ದೊಡ್ಡ ಮೀನುಗಳಿಲ್ಲದಿದ್ದರೂ ಚಿಕ್ಕ ಹಾಗೂ ಸಾಧಾರಣ ಗಾತ್ರದ ಮೀನುಗಳಿದ್ದವು. ಖಿಚಡಿ, ಚೆಂಡು ಹೂವಿನ ವಡೆ, ಎಲೆಕೋಸಿನ ಪಲ್ಯ – ಬಕುಲ ಮರದಡಿಯಲ್ಲಿ ಎಲ್ಲರೂ ಆನಂದದಿಂದ ವನಭೋಜನ ಮಾಡಿದರು. ಸಂಜೆ ಹಿರಿಯರು, ಕಿರಿಯರೆಲ್ಲರೂ ಸೇರಿ ಬಾಬಾರ ಮುಂದೆ ಕಬಡ್ಡಿ ಆಡಿದರು. ದಿನವಿಡೀ ಆನಂದದಿಂದ ಕಳೆಯಿತು.

**೧೪ ಜನವರಿ, ೧೯೩೭:** ''ಕಾಶೀಪುರದಲ್ಲಿ ಒಂದು ದಿನ ಯಾರೋ ಏನೋ ಹೇಳಿದಾಗ ಒಬ್ಬರು, 'ಗೊತ್ತು, ಗೊತ್ತು' ಎಂದರು. ಠಾಕೂರರಿಗೆ ಆಗ ಮಾತನಾಡಿದರೆ ಗಂಟಲಿನಿಂದ ರಕ್ತ ಸುರಿಯುತ್ತಿತ್ತು, ಆದರೂ ಕೈಯನ್ನೂರಿ, ತಲೆದಿಂಬಿನಿಂದ ತಲೆಯೆತ್ತಿ, 'ಏನಂದೆ? ನಿನಗೆ ಗೊತ್ತೆ? ಇನ್ನು ಮುಂದೆ ಹಾಗೆ ಹೇಳಬೇಡ. ನಿನಗೇನು ಗೊತ್ತು? ಕಲಿಯುತ್ತೇನೆ, ಎಲ್ಲಿಯತನಕ ಬದುಕಿರುತ್ತೇನೋ, ಅಲ್ಲಿಯತನಕವೂ ಕಲಿಯುತ್ತೇನೆ. ಯಾರು 'ಗೊತ್ತು' ಎನ್ನುತ್ತಾರೊ ಅವನಿಗೆ ಗೊತ್ತಿಲ್ಲ, ಯಾರು 'ಗೊತ್ತಿಲ್ಲ' ಎನ್ನುತ್ತಾನೋ ಅವನಿಗೆ ಚೆನ್ನಾಗಿ ಗೊತ್ತು. ಅನಂತಜ್ಞಾನದಲ್ಲಿ ಎಷ್ಟು ನಿನಗೆ ತಿಳಿದಿದೆ?' ಅವರ ಅಸ್ವಸ್ಥ ಶರೀರದಿಂದ ಎಷ್ಟು ಮಾತುಗಳು ಹೊರಟವು! ಗಂಟಲಿನಿಂದ ರಕ್ತ ಸುರಿಯಿತು. ಅನಂತರ ಯಾರೂ ಅವರ ಮುಂದೆ 'ಗೊತ್ತು' ಎಂಬ ಮಾತನ್ನಾಡಲಿಲ್ಲ.

''ಅನಂತರ ಉಪನಿಷತ್ತಿನಲ್ಲಿ ಇದೇ ಮಾತನ್ನು ನೋಡಿದೆ: **ಯಸ್ಯ ಮತಂ ತಸ್ಯಾಮತಂ ಅವಿಜ್ಞಾತಂ ವಿಜಾನತಾಂ ವಿಜ್ಞಾತಮವಿಜಾನತಾಂ।** – *'ಯಾರು ತನಗೆ ತಿಳಿದಿದೆಯೆನ್ನುತ್ತಾನೋ ಅವನಿಗೆ ತಿಳಿದಿಲ್ಲ; ಯಾರು ತನಗೆ ತಿಳಿದಿಲ್ಲವೆನ್ನುವನೋ ಅವನಿಗೇ ತಿಳಿದಿದೆ.'*

'' 'ನೀನೇನು ಮಾಡುವ ಅಗತ್ಯವೂ ಇಲ್ಲ, ನಿಂತು ನೀರು ಕುಡಿಯಬೇಡ, ಗಲ್ಲಕ್ಕೆ ಕೈಕೊಟ್ಟು ಕುಳಿತುಕೊಳ್ಳಬೇಡ' ಎಂದು ಠಾಕೂರರು ಹೇಳುತ್ತಿದ್ದರು. ಮಹಾರಾಜರು (ಸ್ವಾಮಿ ಬ್ರಹ್ಮಾನಂದರು) ನೀರು ಕುಡಿಯಬೇಕಾದರೆ ತಾಳೆಯ ಮರದ ಕೆಳಗೆ ಚಪ್ಪಲಿ ಬಿಚ್ಚಿಟ್ಟು ಕುಳಿತು, ನಂತರವೇ ನೀರು ಕುಡಿಯುತ್ತಿದ್ದರು. ಅವರೆಲ್ಲ ತೋರಿಸಿಕೊಟ್ಟು ಹೋಗಿದ್ದಾರೆ, ಆದರೆ ಜನ ಎಷ್ಟನ್ನು ಗ್ರಹಿಸುವರು? ಮಹಾರಾಜ್ ತಮ್ಮ ಎಂಜಲನ್ನು ಪ್ರಸಾದವಾಗಿ ಯಾರಿಗೂ ಕೊಡುತ್ತಿರಲಿಲ್ಲ; ಅದನ್ನು ಕೇಳಿದರೆ, 'ನಿನಗೆ ಕೊಡಲಾರೆ' ಎನ್ನುತ್ತಿದ್ದರು. ಆಗ ನಾನು ಅದನ್ನು ಸ್ವೀಕರಿಸುತ್ತಿದ್ದೆ.''

**೧೫ ಜನವರಿ, ೧೯೩೭:** ಪೌಷ ಸಂಕ್ರಾಂತಿ; ಗಂಗಾಸ್ನಾನದ ಮೇಳದಲ್ಲಿ ಆಶ್ರಮದ ನಾಯಿ ಕಾಣೆಯಾಗಿದೆ. ಸಾಯಂಕಾಲ ಬಾಬಾ ಹೇಳುತ್ತಿದ್ದಾರೆ: ''ಬಹಳ ದುಃಖವಾಗುತ್ತಿದೆ. bereavement (ವಿಯೋಗ ದುಃಖ)ದ ಹಾಗೆ.'' ಸ್ವಲ್ಪ ಹೊತ್ತಿನಲ್ಲಿ ನಾಯಿಯನ್ನು ಯಾರೋ ಕಟ್ಟಿಹಾಕಿದ್ದಾರೆಂಬ ಸುದ್ದಿ ಬಂತು. ಮಾರನೆಯ ದಿನ ಯಾರೋ ಒಬ್ಬರು ಹೋಗಿ ಅದನ್ನು ಕರೆದುಕೊಂಡು ಬಂದರು.

ಸಂಜೆ ಶಾಸ್ತ್ರವ್ಯಾಖ್ಯಾನ ಮಾಡುತ್ತಿರುವಾಗ ಎಷ್ಟೋ ವಿಚಾರಗಳು ಬಂದವು. 'ದ್ಯೋತನಾ', 'ಮೂರ್ಛನಾ', 'ಲಕ್ಷಣಾ' ಇತ್ಯಾದಿ. ''ವೇದಾಂತದಲ್ಲಿ ಇವೆಲ್ಲ ಇವೆ. '**ಗಂಗಾಯಾಂ ಘೋಷಃ**' – ಇದು 'ಲಕ್ಷಣಾ'ಗೆ ಉದಾಹರಣೆ. ಗಂಗೆಯಲ್ಲಿ ಗೋಪಾಲಕರ ಹಳ್ಳಿಗಳಿರುವುದಿಲ್ಲ, ಆದ್ದರಿಂದ ಇದನ್ನು 'ಗಂಗಾತೀರದಲ್ಲಿ' ಎಂದು ಅರ್ಥೈಸಬೇಕು. ಸೂಚನೆ, ಸಂಜ್ಞೆಗಳಿಂದ ಸಂದರ್ಭವನ್ನು ತಿಳಿದು ಕೊಳ್ಳಬೇಕು ತಿಳಿಯಿತೆ? ಇಲ್ಲಿ ಸ್ಪಷ್ಟವಾಗಿ ಯಾವುದನ್ನೂ ಹೇಳುವುದಿಲ್ಲ.''

**೧೮ ಜನವರಿ, ೧೯೩೭:** ಸಂಜೆಯ ಹೊತ್ತು. ಆಗಲೇ ಕತೆ ಆರಂಭವಾಗಿಬಿಟ್ಟಿದೆ. ''ಬ್ರಾಹ್ಮಣ, ಹೊರೆ ಹಾಗೂ ಕೂಲಿಯವನ ಕತೆ. ಸ್ವಲ್ಪ ದೂರ ಹೋಗುತ್ತಲೇ ಬ್ರಾಹ್ಮಣನು ಅದೇಕೋ ಆ ಮನುಷ್ಯನಿಗೆ 'ನೀನು ಚಮ್ಮಾರ' ಎಂದನು. ತಕ್ಷಣವೇ ಆ ಕೂಲಿಯು ತಾನು ಹೊತ್ತಿದ್ದ ಹೊರೆಯನ್ನು ಎಸೆದು ಓಡಿ ಹೋದನು. ಅವನು ನಿಜವಾಗಿಯೂ ಚಮ್ಮಾರರ ಜಾತಿಗೆ ಸೇರಿದ್ದನಲ್ಲ, ಆದ್ದರಿಂದ.

''ಮಾಯೆಯ ಸ್ವರೂಪವನ್ನು ವಿವರಿಸುವಾಗ ಠಾಕೂರರು ಈ ಕತೆಯನ್ನು ಹೇಳುತ್ತಿದ್ದರು. ಮಾಯೆಯನ್ನು ಗುರುತಿಸಿದ ಕೂಡಲೆ ಅದು ಓಡಿ ಹೋಗುತ್ತದೆ. 'ನಾನು ಮೂರ್ಖ, ಬುದ್ಧಿಹೀನ', ಎಂದು ಚೆನ್ನಾಗಿ ತಿಳಿದುಕೊಂಡರೆ ಅವನು ನಿಜವಾಗಿಯೂ ಬುದ್ಧಿವಂತನೇ. ಸರಳ ಹೃದಯದಿಂದ ಭಗವಂತನ ಬಳಿಸಾರಿ ಒಂದು ರಾತ್ರಿಯೆಲ್ಲ ಕಣ್ಣೀರಿಡುತ್ತ ಹೇಳು ನೋಡೋಣ, 'ಪ್ರಭು, ನಾನು ಮೂರ್ಖ; ಬುದ್ಧಿಹೀನ, ನನಗೇನೂ ತಿಳಿಯದು, ನನಗೇನೂ ಅರ್ಥವಾಗದು. ನೀನೇ ತಿಳಿಸಿಕೊಡು, ದರ್ಶನ ನೀಡು.' ಆಗ ರಾತ್ರೋರಾತ್ರಿ ಎಲ್ಲವೂ ತಲೆಕೆಳಗಾಗಿದೆ ಎಂಬುದನ್ನು ನೋಡುವೆ. ತಾನು ಮೂರ್ಖನೆಂದು ಅರಿತವನು ಇನ್ನುಮೇಲೆ ಮೂರ್ಖನಾಗಿ ಉಳಿಯುವನೆ? 'The fool who knows that he is a fool is wise so far. But the fool who thinks himself wise is a fool indeed.'(ಯಾವ ಬುದ್ಧಿಹೀನನಿಗೆ ತಾನು ಮೂರ್ಖನೆಂದು ತಿಳಿದಿದೆಯೋ ಅವನು ನಿಜವಾಗಿ ಜ್ಞಾನಿ. ಆದರೆ ಯಾವ ಮೂರ್ಖ ತಾನು ಜ್ಞಾನಿಯೆಂದುಕೊಂಡಿರುವನೋ ಅವನು ನಿಜವಾಗಿಯೂ ಮೂರ್ಖ). ಎಷ್ಟು ಸೊಗಸಾದ ಮಾತು!'' *(ಮುಂದುವರಿಯುವುದು)*

**ಸ್ವಾಮಿ ನಿತ್ಯಸ್ಥಾನಂದ**




# ಶ್ರದ್ಧಾತ್ರಯ

**ಮಾ**ನವ ಜೀವನದಲ್ಲಿ , ವಿಶೇಷವಾಗಿ ಆಧ್ಯಾತ್ಮಿಕ ಜೀವನದಲ್ಲಿ , ಶ್ರದ್ಧೆಯ ಮಹತ್ವ ಎಲ್ಲರಿಗೂ ತಿಳಿದಿರುವ ವಿಷಯ. ವೇದದಲ್ಲಿ ಬರುವ **ಶ್ರದ್ಧಾಸೂಕ್ತ**ವು ಶ್ರದ್ಧೆಯನ್ನು ದೇವತೆಯ ಮಟ್ಟಕ್ಕೆ ಏರಿಸಿ ಸ್ತುತಿಸುತ್ತದೆ. ಸೂಕ್ತದ ಕೊನೆಯ ಶ್ಲೋಕವು ತುಂಬ ಭಾವಪೂರ್ಣವಾಗಿದೆ:

**ಶ್ರದ್ಧಾಂ ಪ್ರಾತರ್ಹವಾಮಹೇ ಶ್ರದ್ಧಾಂ ಮಧ್ಯಂದಿನಂ ಪರಿ ।**
**ಶ್ರದ್ಧಾಂ ಸೂರ್ಯಸ್ಯ ನಿಮ್ರುಚಿ ಶ್ರದ್ಧೇ ಶ್ರದ್ಧಾಪಯೇಹ ನಃ ॥**

''ದಿನದ ಪ್ರಾರಂಭದಲ್ಲಿಯೂ, ಮಧ್ಯದಲ್ಲಿಯೂ, ಕೊನೆಯಲ್ಲಿಯೂ ನಾವು ಶ್ರದ್ಧೆಯನ್ನು ಪೂಜಿಸುತ್ತೇವೆ. ಹೇ ಶ್ರದ್ಧೆ, ನಮ್ಮನ್ನು ಶ್ರದ್ಧಾವಂತರನ್ನಾಗಿ ಮಾಡು.'' ವ್ಯಾಸಮಹರ್ಷಿಗಳು ತಮ್ಮ ಯೋಗ ಸೂತ್ರ ಭಾಷ್ಯದಲ್ಲಿ ಶ್ರದ್ಧೆಯನ್ನು ಕೊಂಡಾಡುತ್ತ ಹೀಗೆ ಹೇಳುತ್ತಾರೆ: **ಸಾ ಹಿ ಜನನೀವ ಕಲ್ಯಾಣೀ ಯೋಗಿನಂ ಪಾತಿ** – ''ಶ್ರದ್ಧೆಯು ಮಂಗಳಮಯಿ ತಾಯಿಯಂತೆ ಯೋಗಿಯನ್ನು ರಕ್ಷಿಸುತ್ತದೆ.'' ಬೈಬಲ್ಲಿನ ಹೊಸ ಒಡಂಬಡಿಕೆಯಲ್ಲಿ ಬರುವ ಈ ಹೇಳಿಕೆಯು ತುಂಬ ವಿಶಿಷ್ಟವಾದುದು: ''ನಾವು ನಡೆಯುವುದು ಶ್ರದ್ಧಾಶಕ್ತಿಯಿಂದ, ದೃಷ್ಟಿಶಕ್ತಿಯಿಂದಲ್ಲ.'' ಹೀಗೆ ಶ್ರದ್ಧೆಯ ಮಹತ್ವವನ್ನು ತಿಳಿಸುವ ಅನೇಕ ಹೇಳಿಕೆಗಳನ್ನು ಉದಾಹರಿಸಬಹುದು.

ಗೀತೆಯ ಹದಿನೇಳನೆಯ ಅಧ್ಯಾಯವು ಅರ್ಜುನನ ಪ್ರಶ್ನೆಯೊಂದಿಗೆ ಪ್ರಾರಂಭವಾಗುತ್ತದೆ: ''ಯಾರು ಶಾಸ್ತ್ರವಿಧಿಯನ್ನು ಬಿಟ್ಟು, ಆದರೆ ಶ್ರದ್ಧಾವಂತರಾಗಿ ಪೂಜಾದಿಗಳನ್ನು ಆಚರಿಸುತ್ತಾರೋ ಅವರ ನಿಷ್ಠೆಯು ಎಂತಹುದು – ಸಾತ್ತ್ವಿಕವೋ, ರಾಜಸಿಕವೋ ಅಥವಾ ತಾಮಸಿಕವೋ?'' ಈ ಪ್ರಶ್ನೆಯು ಶಾಸ್ತ್ರಾರ್ಥವನ್ನು ತಿಳಿದೂ ಅದನ್ನು ಉಲ್ಲಂಘಿಸಿ ವರ್ತಿಸುವವರನ್ನು ಕುರಿತಾದುದಲ್ಲ. ಏಕೆಂದರೆ ಅವರ ವಿಷಯದಲ್ಲಿ ಶ್ರದ್ಧೆಯಿಂದ ಆಚರಿಸುವ ಮಾತೇ ಬರುವುದಿಲ್ಲ. ಹಿಂದಿನ ಅಧ್ಯಾಯದಲ್ಲಿಯೇ ಶ್ರೀಕೃಷ್ಣನು ಹೇಳಿದ್ದಾನೆ: ''ಯಾರು ಶಾಸ್ತ್ರವಿಧಿಯನ್ನು ಉಲ್ಲಂಘಿಸಿ ಮನಬಂದಂತೆ ವರ್ತಿಸುತ್ತಾರೋ ಅವರಿಗೆ ಯಾವ ಸಿದ್ಧಿಯೂ ಇಲ್ಲ, ಸುಖವೂ ಇಲ್ಲ, ಉನ್ನತ ಗತಿಯೂ ಇಲ್ಲ.'' *(೧೬.೨೩)* ಶಾಸ್ತ್ರವೇತ್ತರಾಗಿಯೂ ಅನೇಕರಿಗೆ ಶ್ರದ್ಧೆ ಇಲ್ಲದಿರಬಹುದು, ಹಾಗೂ ಶಾಸ್ತ್ರಜ್ಞಾನವಿಲ್ಲದೆಯೂ ಅನೇಕರು ಶ್ರದ್ಧಾವಂತರಾಗಿರಬಹುದು.

'ಶ್ರದ್ಧೆ' ಎಂದರೆ ಆಸ್ತಿಕ್ಯಬುದ್ಧಿ (positive attitude). ಈ ಪದವು ತುಂಬ ಅರ್ಥಗರ್ಭಿತವಾದುದು. ನಿಷ್ಠೆ, ಪ್ರಾಮಾಣಿಕತೆ, ಆದರ, ಉತ್ಸಾಹ ಇತ್ಯಾದಿ ಹಲವು ಅರ್ಥಗಳು ಈ ಶಬ್ದದಲ್ಲಿ ಅಡಕವಾಗಿವೆ. ಶ್ರದ್ಧಾವಂತನು ಯಾವುದೇ ಕಾರ್ಯವನ್ನು ಅತ್ಯಂತ ನಿಷ್ಠೆಯಿಂದ ಮಾಡುತ್ತಾನೆ. ಅಲ್ಲಿ ಅಸಡ್ಡೆಗೆ ಅವಕಾಶವಿರುವುದಿಲ್ಲ. ತಾನು ಮಾಡುವುದನ್ನು ಅವನು ಪ್ರೀತಿಸುತ್ತಾನೆ, ಅನಾದರವಿರುವುದಿಲ್ಲ. ಯಾವುದೇ ಕಾರ್ಯಸಾಧನೆಯಲ್ಲಿಯೂ ಅವನು ಪ್ರಾಮಾಣಿಕ ಪ್ರಯತ್ನ ಮಾಡುತ್ತಾನೆ, ಮತ್ತು ಉತ್ಸಾಹದಿಂದ ಮಾಡುತ್ತಾನೆ. ಮನಸ್ಸಿಲ್ಲದ ಮನಸ್ಸಿನಿಂದ ಅವನು ಮಾಡುವುದಿಲ್ಲ. ಯಾವುದೇ ವಿಷಯದಲ್ಲಿ ಶ್ರದ್ಧೆಯಿದ್ದರೆ ಅವನು ಅದನ್ನು ಸಾಧಿಸಲೇಬೇಕು, ಶ್ರದ್ಧೆಯು ಅವನನ್ನು ಸುಮ್ಮನೆ ಕುಳಿತುಕೊಳ್ಳಲು ಬಿಡುವುದಿಲ್ಲ. ಶ್ರೀರಾಮಕೃಷ್ಣರು ಇದನ್ನು ಒಂದು ಉದಾಹರಣೆಯ ಮೂಲಕ ವಿವರಿಸುತ್ತಿದ್ದರು: ಒಬ್ಬ ಕಳ್ಳನಿಗೆ ಪಕ್ಕದ ಕೋಣೆಯಲ್ಲಿ ಬೇಕಾದಷ್ಟು ಸಂಪತ್ತು, ಚಿನ್ನ, ವಜ್ರವೈಡೂರ್ಯಗಳು ಇವೆ ಎಂದು ಗೊತ್ತಾದರೆ ಅವನು ಸುಮ್ಮನೆ ಕುಳಿತುಕೊಳ್ಳಲು ಸಾಧ್ಯವೇ ಇಲ್ಲ. ಹೇಗಾದರೂ ಮಾಡಿ ಗೋಡೆಯನ್ನಾದರೂ ಒಡೆದು ಹಣವನ್ನು ದೋಚುವವರೆಗೂ ಅವನಿಗೆ ಸಮಾಧಾನವಿರುವುದಿಲ್ಲ. ಶ್ರದ್ಧೆಯಿದ್ದೂ ಕಾರ್ಯತತ್ಪರನಾಗದಿರಲು ಸಾಧ್ಯವೇ ಇಲ್ಲ.

ಸಾಮಾನ್ಯ ನಂಬಿಕೆಗೂ ಹಾಗೂ ಶ್ರದ್ಧೆಗೂ ತುಂಬ ವ್ಯತ್ಯಾಸವಿದೆ. ಅನೇಕರು ದೇವರನ್ನು ನಂಬುತ್ತಾರೆ, ಆದರೆ ದೇವರನ್ನು ಪಡೆಯಬೇಕು, ಆಧ್ಯಾತ್ಮಿಕವಾಗಿ ತಾವು ಮುಂದುವರಿಯಬೇಕು ಎಂಬ ಉತ್ಸಾಹವಿರುವುದಿಲ್ಲ , ಮತ್ತು ಪ್ರಾಪಂಚಿಕ ವಿಷಯದಲ್ಲಿ ವೈರಾಗ್ಯವೂ ಇರುವುದಿಲ್ಲ. ಅವರು ಯಾಂತ್ರಿಕವಾಗಿಯೋ ಡಾಂಭಿಕ

ವಾಗಿಯೋ ಧರ್ಮಾಚರಣೆಯನ್ನು ಮಾಡಬಹುದು ಅಷ್ಟೆ. ನಾವು ಎಷ್ಟೋ ವಿಷಯಗಳನ್ನು, ವಸ್ತುಗಳನ್ನು ಹಾಗೂ ವ್ಯಕ್ತಿಗಳನ್ನು ನಂಬುತ್ತೇವೆ. ಆದರೆ ಅದು ನಮ್ಮನ್ನು ಕೆರಳಿಸುವುದಿಲ್ಲ. ಆದರೆ ಶ್ರದ್ಧೆ ನಮ್ಮನ್ನು ಕೆರಳಿಸುತ್ತದೆ. ನಾವು ಯಾವುದೊ ದುರ್ಘಟನೆಯ ಬಗ್ಗೆ ಕೇಳುತ್ತೇವೆ, ಹೇಳಿದವನು ನಂಬಿಗಸ್ಥನಾದರೆ ಅದನ್ನು ನಂಬುತ್ತೇವೆ. ಅದು ಅಷ್ಟಕ್ಕೇ ಸಮಾಪ್ತಿಗೊಳ್ಳುತ್ತದೆ. ಆದರೆ ಆ ದುರ್ಘಟನೆಯು ನನ್ನ ಕಣ್ಮುಂದೆಯೇ ನಡೆದರೆ ಅದರ ಪರಿಣಾಮವೇ ಬೇರೆ. ಅದು ನನ್ನಲ್ಲಿ ಏನೋ ಒಂದು ಭಾವವನ್ನು ಕೆರಳಿಸುತ್ತದೆ. ಸಾಮಾನ್ಯ ನಂಬಿಕೆಗೂ ಶ್ರದ್ಧೆಗೂ ಇರುವ ವ್ಯತ್ಯಾಸವನ್ನು ನಾವು ಇಲ್ಲಿ ಗುರುತಿಸಬಹುದು.

ನಚಿಕೇತನನ್ನು ಶ್ರದ್ಧೆಯು ಪ್ರವೇಶಿಸಿತು ಎಂದು ನಾವು ಕಠೋಪನಿಷತ್ತಿನಲ್ಲಿ ಓದುತ್ತೇವೆ. ಆ ಶ್ರದ್ಧೆಯ ಪರಿಣಾಮವೇನಾಯಿತು? ಅವನಲ್ಲಿ ಅಪಾರ ಆತ್ಮವಿಶ್ವಾಸವುಂಟಾಯಿತು, ಮೃತ್ಯುವನ್ನೇ ಎದುರಿಸಲು ಅವನು ಮುಂದಾದ. ಅವನು ಕೇವಲ ಬಾಲಕನಾದರೂ ವಯಸ್ಕರಲ್ಲೂ ಅಪರೂಪಕ್ಕೆ ಕಾಣುವ ಪ್ರೌಢಿಮೆ ದಿಟ್ಟತನ ಅವನಲ್ಲಿ ಆವಿರ್ಭವಿಸಿತು. ಅವನು ತನ್ನ ಕೌಟುಂಬಿಕ ಜವಾಬ್ದಾರಿಯನ್ನೂ ಸಾಮಾಜಿಕ ಜವಾಬ್ದಾರಿಯನ್ನೂ ಮರೆಯಲಿಲ್ಲ (ಅವನು ಕೇಳಿದ ಮೊದಲೆರಡು ವರ, ಇದನ್ನು ಸೂಚಿಸುತ್ತದೆ.) ಆತ್ಮತತ್ತ್ವವನ್ನು ಅರಿಯಲೇಬೇಕೆಂಬ ದೃಢ ನಿರ್ಧಾರ ಅವನಲ್ಲಿ ಜಾಗೃತಗೊಂಡಿತು. ಯಮನು ಒಡ್ಡಿದ ಯಾವುದೇ ಪ್ರಲೋಭನೆಗಳಿಗೂ ಅವನು ಬಲಿಯಾಗಲಿಲ್ಲ. ಇವೆಲ್ಲವೂ ಶ್ರದ್ಧೆಯ ಪರಿಣಾಮ. ಇದರ ಪರಿಣಾಮವಾಗಿ ಅವನಲ್ಲಿ ಅಪಾರ ಆತ್ಮವಿಶ್ವಾಸವುಂಟಾಯಿತು, ತನ್ನ ಬಗ್ಗೆ ನಮ್ರತಾಪೂರ್ಣವಾದ ವಾಸ್ತವದೃಷ್ಟಿ ಅವನಲ್ಲಿ ಉಂಟಾಯಿತು – ಅದು ಕೀಳರಿಮೆಯೂ ಅಲ್ಲ, ಮೇಲರಿಮೆಯೂ ಅಲ್ಲ. ಆತ್ಮವಸ್ತುವಿನಲ್ಲಿ ಶ್ರದ್ಧೆ ಹಾಗೂ ಗುರುವಾಕ್ಯದಲ್ಲಿ ಶ್ರದ್ಧೆ – ಇವು ಅವನಿಗೆ ಆಶ್ರಯವಾದವು. ಇಂತಹ ಶ್ರದ್ಧೆಯ ಮೂಲಕವೇ ಅವನು ಸಿದ್ಧಿಯನ್ನು ಪಡೆದನು.

ಸಾತ್ತ್ವಿಕ, ರಾಜಸಿಕ ಮತ್ತು ತಾಮಸಿಕ ಎಂಬ ಮೂರು ಬಗೆಯ ಶ್ರದ್ಧೆಗಳಿವೆಯೆಂದು ಶ್ರೀಕೃಷ್ಣನು ಹೇಳುತ್ತಾನೆ. ಶಾಸ್ತ್ರಾನುಸಾರವಾಗಿ ನೈಜ ಭಕ್ತಿಯಿಂದ ಭಗವದ್‌ಪೂಜಾದಿಗಳನ್ನು ಮಾಡುವುದು ಯಾವಾಗಲೂ ಸಾತ್ತ್ವಿಕ ಶ್ರದ್ಧೆಯೇ. ಶ್ರೀಧರ ಸ್ವಾಮಿಗಳು ಹೇಳುವಂತೆ, ''ಅವರು ಶಾಸ್ತ್ರದಿಂದ ಉಂಟಾದ ವಿವೇಕಜ್ಞಾನದ ಮೂಲಕ ತಮ್ಮ ಸ್ವಭಾವವನ್ನು ಗೆಲ್ಲುತ್ತಾರೆ, ಅದರಿಂದಾಗಿ ಅವರ ಶ್ರದ್ಧೆಯು ಸಾತ್ತ್ವಿಕವಾಗಿಯೇ ಇರುತ್ತದೆ.'' **(ಶಾಸ್ತ್ರಜನಿತವಿವೇಕಜ್ಞಾನ ಯುಕ್ತಾನಾಂ ತು ಸ್ವಭಾವವಿಜಯೇನ ಸಾತ್ತ್ವಿಕೀ ಏಕಾ ಏವ ಶ್ರದ್ಧಾ ।)** ಶಾಸ್ತ್ರವನ್ನು ಅರಿಯದಿರುವುದರಿಂದ ಇಂತಹ ವಿವೇಕಜ್ಞಾನ ಉಂಟಾಗದೆಯೂ ಅನೇಕರು ಶ್ರದ್ಧಾವಂತರಾಗಿ ಧರ್ಮಾಚರಣೆ ಮತ್ತು ಆಧ್ಯಾತ್ಮಿಕ ಸಾಧನೆಗಳನ್ನು ಮಾಡುವವರಿರುತ್ತಾರೆ. ಇಲ್ಲಿ ಶಾಸ್ತ್ರಜ್ಞಾನವೆಂದರೆ ವೇದಾದಿ ಶಾಸ್ತ್ರಗಳಿಗೆ ಮಾತ್ರ ಸೀಮಿತವಾಗಿರುವುದಿಲ್ಲ; ಶ್ರೀರಾಮಕೃಷ್ಣರಂತಹ ಮಹಾತ್ಮರ ನುಡಿಗಳೂ ಶಾಸ್ತ್ರಕ್ಕೆ ಸಮಾನವೇ. ಈಗ ನಾವಿಲ್ಲಿ ಮೂರು ಬಗೆಯ ಜನರನ್ನು ಗುರುತಿಸಬಹುದು:



೧. ಶಾಸ್ತ್ರವಿಧಿಯನ್ನು ಉಲ್ಲಂಘಿಸಿ ಮನಬಂದಂತೆ ವರ್ತಿಸುವವರು – ಇವರು ಆಸುರೀ ಸಂಪತ್ತಿನವರು, ಮತ್ತು ತಾಮಸಿಕರು.
೨. ಶಾಸ್ತ್ರಾನುಸಾರವಾಗಿ ವರ್ತಿಸುವವರು ಸಾತ್ತ್ವಿಕ ಶ್ರದ್ಧೆಯುಳ್ಳ ವ್ಯಕ್ತಿಗಳು.
೩. ಶಾಸ್ತ್ರವನ್ನು ತಿಳಿಯದೆ, ಅಥವಾ ಅದರಂತೆ ಅನುಸರಿಸಲಾಗದೆ ಶ್ರದ್ಧಾವಂತರಾಗಿ ಪೂಜಾದಿಗಳನ್ನು ಮಾಡುವವರು. ಇವರಲ್ಲಿ ಮೂರು ವರ್ಗ: ಸಾತ್ತ್ವಿಕ, ರಾಜಸಿಕ ಮತ್ತು ತಾಮಸಿಕ.

ಇದರಿಂದ ನಮಗೆ ತಿಳಿದುಬರುವುದೇನೆಂದರೆ, ಎಲ್ಲರಲ್ಲಿಯೂ ಯಾವುದಾದರೂ ಒಂದು ಬಗೆಯ ಶ್ರದ್ಧೆ ಇರುತ್ತದೆ. ಆದ್ದರಿಂದಲೇ ಶ್ರೀಕೃಷ್ಣನು ಹೇಳುತ್ತಾನೆ: **ಶ್ರದ್ಧಾಮಯೋಽಯಂ ಪುರುಷೋ ಯೋ ಯಚ್ಛ್ರದ್ಧಃ ಸ ಏವ ಸಃ ॥** ''ಈ ಮಾನವನು ಶ್ರದ್ಧಾಮಯನು, ಅವನವನ ಶ್ರದ್ಧೆಗನುಗುಣವಾಗಿ ಅವನ ಸ್ವಭಾವವಿರುತ್ತದೆ.'' ತಾನು ದಡ್ಡ ಎಂದು ನಂಬುವವನು ದಡ್ಡನೇ ಆಗುತ್ತಾನೆ; ತಾನು ದುರ್ಬಲ ಎಂದು ನಂಬುವವನು ದುರ್ಬಲನೇ ಆಗುತ್ತಾನೆ, ಪಾಪಿ ಎಂದು ನಂಬುವವನು ಪಾಪಿಯೇ ಆಗುತ್ತಾನೆ. ಇದಕ್ಕೆ ವಿರುದ್ಧವಾಗಿ ಭಾವಿಸುವವನು ಉತ್ತಮನಾಗುತ್ತಾನೆ. ಇದು ಎಲ್ಲ ಮಹಾತ್ಮರೂ ಹೇಳಿರುವ ವಿಷಯ. ಅನೇಕರು 'ಇದು ಹೇಳುವುದು ಸುಲಭ, ಆಚರಿಸುವುದು ಕಷ್ಟ' ಎಂದು ದೃಢವಾಗಿ ನಂಬುತ್ತಾರೆ. ಈ ನಂಬಿಕೆಯೇ ಅವರಲ್ಲಿ ಆಚರಣೆಗೆ ದೊಡ್ಡ ಅಡಚಣೆಯಾಗುತ್ತದೆ.

ಅನೇಕರು ಸ್ಥಿತಪ್ರಜ್ಞನ ಅಥವಾ ಭಕ್ತನ ಗುಣಲಕ್ಷಣಗಳು ಸತ್ಯಸಾಕ್ಷಾತ್ಕಾರವನ್ನು ಪಡೆದವರಿಗೆ ಮಾತ್ರ ಸಾಧ್ಯ ಎಂದು ನಂಬಿ ಅವುಗಳನ್ನು ಅನುಸರಿಸುವುದನ್ನೇ ಬಿಟ್ಟುಬಿಡುತ್ತಾರೆ. ಪ್ರಯತ್ನಿಸಿದರೆ ನಾವು ಅವುಗಳನ್ನು ಪಡೆಯಬಹುದು ಎಂದು ನಂಬಿದರೆ ಆ ಪ್ರಯತ್ನದ ಮೂಲಕ ನಮ್ಮ ಜೀವನ ಉತ್ತಮವಾಗುತ್ತದೆ. ತನಗೇನೂ

ಸಾಧ್ಯವಿಲ್ಲ ಎಂದು ನಂಬುವವರಿಗೆ ಏನೂ ಸಾಧ್ಯವಾಗುವುದೇ ಇಲ್ಲ. ಕೆಲವರು ಕೆಲವು ಸೋಲಲನ್ನು ಅನುಭವಿಸಿ, ಸೋಲೇ ತಮ್ಮ ಪಾಲಿಗೆ ಎಂದು ನಂಬಿ ಜೋಲು ಮುಖಮಾಡಿಕೊಂಡು ಸೋಲಿನ ಜೀವನ ನಡೆಸುತ್ತಾರೆ. ಶ್ರದ್ಧಾವಂತರು ಸೋತರೂ ಗೆದ್ದವರಂತೆ ಗೆಲುವಿನ ಜೀವನ ನಡೆಸುತ್ತಾರೆ. ಜನರು ಅವರವರ ಶ್ರದ್ಧೆಯಂತೆ ಇರುತ್ತಾರೆ, ಅದರಂತೆ ಆಗುತ್ತಾರೆ. ಭಯೋತ್ಪಾದಕರಲ್ಲಿಯೂ ಒಂದು ರೀತಿಯ ಶ್ರದ್ಧೆ ಇರುತ್ತದೆ. ದರೋಡೆಕೋರರಲ್ಲಿಯೂ ಒಂದು ಬಗೆಯ ಶ್ರದ್ಧೆ ಇರುತ್ತದೆ. ಆ ಶ್ರದ್ಧೆಯೇ ಅವರನ್ನು ಆಯಾಯ ಕೃತ್ಯದಲ್ಲಿ ತೊಡಗಿಸುತ್ತದೆ. ನಾಸ್ತಿಕರಲ್ಲಿಯೂ ಕೂಡ ಅಪಾರ ಶ್ರದ್ಧೆ ಇರುತ್ತದೆ. ಸ್ವಾಮಿ ವಿವೇಕಾನಂದರು ದೇವರನ್ನು ಸುಮ್ಮನೆ ನಂಬುವವನಿಗಿಂತ ನಾಸ್ತಿಕನೇ ಶ್ರೇಷ್ಠ ಎಂದು ಭಾವಿಸುತ್ತಾರೆ, ಏಕೆಂದರೆ ನಾಸ್ತಿಕನು ತನ್ನ ನಂಬಿಕೆಯನ್ನು ಗಂಭೀರವಾಗಿ ಸ್ವೀಕರಿಸುತ್ತಾನೆ. ಅವರು ಹೇಳುತ್ತಾರೆ: ''ನಾಸ್ತಿಕರಿಗಾದರೋ ಒಂದು ಭರವಸೆ ಇದೆ. ಏಕೆಂದರೆ ಇತರರ ಆಲೋಚನೆಗಳನ್ನು ಒಪ್ಪದೆ ಇದ್ದರೂ ತಾವೇ ಸ್ವತಃ ಆಲೋಚಿಸುತ್ತಾರೆ. ತಾವೇ ಸ್ವತಃ ಏನನ್ನೂ ಆಲೋಚಿಸದವರು ಇನ್ನೂ ಧಾರ್ಮಿಕ ಪ್ರಪಂಚದಲ್ಲಿ ಕಣ್ಣನ್ನೇ ತೆರೆದಿಲ್ಲ. ಅವರು ಹೇಗೋ ಇದ್ದಕಡೆ ಇದ್ದುಕೊಂಡು ಬದುಕಿರುತ್ತಾರೆ. ಅವರು ಆಲೋಚಿಸುವುದಿಲ್ಲ. ಅವರು ಧರ್ಮವನ್ನು ಲಕ್ಷಿಸುವುದಿಲ್ಲ. ಆದರೆ ನಂಬದವನು, ನಾಸ್ತಿಕನು ಧರ್ಮದ ಬಗ್ಗೆ ಆಳವಾಗಿ ಆಲೋಚಿಸುತ್ತಾನೆ, ಅವನು ಹೋರಾಡುತ್ತಾನೆ.'' *(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ. ೭, ಪು. ೨೯–೩೦)*

ಮೂರು ಬಗೆಯ ಶ್ರದ್ಧೆಗಳನ್ನು ಹೇಳಿ ಶ್ರೀಕೃಷ್ಣನು ಆಯಾಯ ಶ್ರದ್ಧಾವಂತರ ಲಕ್ಷಣಗಳನ್ನು ವಿವರಿಸುತ್ತಾನೆ. ಸಾತ್ತ್ವಿಕ ಶ್ರದ್ಧಾವಂತರು ಸಾತ್ತ್ವಿಕ ದೇವರನ್ನು ಪೂಜಿಸುತ್ತಾರೆ, ಅಂದರೆ ಉದಾತ್ತ ಧ್ಯೇಯಗಳನ್ನು ಪ್ರತಿನಿಧಿಸುವ ದೇವರನ್ನು ಪೂಜಿಸುತ್ತಾರೆ. ರಾಜಸ ಶ್ರದ್ಧಾವಂತರು, ಅಧಿಕಾರ, ಸಂಪತ್ತು, ಇಂದ್ರಿಯಸುಖ ಮುಂತಾದವುಗಳನ್ನು ಪ್ರತಿನಿಧಿಸುವ ದೇವರನ್ನು ಪೂಜಿಸುತ್ತಾರೆ. ಏಕೆಂದರೆ ಅವರು ಅವುಗಳನ್ನು ತೀವ್ರವಾಗಿ ಬಯಸುತ್ತಾರೆ. ತಾಮಸಿಕರು, ಭೂತಪ್ರೇತಗಳನ್ನು ಪೂಜಿಸುತ್ತಾರೆ. ಪ್ರೇತ ಆವಾಹನೆ, ಪ್ರೇತ ಮನುಷ್ಯರ ಮೂಲಕ ಮಾತನಾಡುವುದು, ಮಾಟ–ಮಂತ್ರ ಇತ್ಯಾದಿಗಳಲ್ಲಿ ಅವರಿಗೆ ಶ್ರದ್ಧೆ ಇರುತ್ತದೆ.

ಸ್ವೀಕರಿಸುವ ಆಹಾರದಲ್ಲಿಯೂ ಈ ಮೂವರಲ್ಲಿ ವ್ಯತ್ಯಾಸವಿರುತ್ತದೆ. ಸಾತ್ತ್ವಿಕರು ಪೌಷ್ಟಿಕಾಂಶ ಹೆಚ್ಚಾಗಿರುವ, ಉತ್ಸಾಹವನ್ನು ಕೆರಳಿಸುವ, ಆರೋಗ್ಯಕರವಾದ, ಮನಸ್ಸಿಗೆ ಸುಖವನ್ನುಂಟು ಮಾಡುವ, ಉತ್ತಮ ಅಭಿರುಚಿಯನ್ನು ಹೆಚ್ಚಿಸುವ, ರಸವತ್ತಾದ, ಸುಲಭವಾಗಿ ಜೀರ್ಣವಾಗುವ ಮತ್ತು ಸಾರರೂಪದಲ್ಲಿ ದೇಹದಲ್ಲಿ ಬಹಳ ಕಾಲ ಇರುವ ಆಹಾರವನ್ನು ಇಷ್ಟಪಡುತ್ತಾರೆ. ರಾಜಸಿಕರು ಅತಿಕಟುವಾದ, ತುಂಬ ಮಸಾಲೆಯಿಂದ ಕೂಡಿದ, ತೀವ್ರಹುಳಿಯೂ ಉಪ್ಪೂ ಆದ, ಒಣಕಲಾದ, ತುಂಬ ದಾಹವನ್ನು ಉಂಟುಮಾಡುವ ಆಹಾರವನ್ನು ಇಷ್ಟಪಡುತ್ತಾರೆ. ಅದು ನಾಲಿಗೆಗೆ ಚುರು ಚುರು ಅನ್ನುತ್ತಿರಬೇಕು. ಅದು ತಾತ್ಕಾಲಿಕವಾದ ಇಂದ್ರಿಯ ಸುಖವನ್ನು ನೀಡುತ್ತದೆ, ಕೊನೆಯಲ್ಲಿ ಆರೋಗ್ಯವನ್ನು ಕೆಡಿಸಿ ದುಃಖಕ್ಕೆ ಕಾರಣವಾಗುತ್ತದೆ. ತಾಮಸಿಕರು, ಮಾಡಿ ಬಹಳ ಕಾಲವಾದ ಹಳಸಿದ ಆಹಾರವನ್ನು ಇಷ್ಟಪಡುತ್ತಾರೆ. ತಂಗಳುಪೆಟ್ಟಿಗೆಯಲ್ಲಿ ಇಟ್ಟ ಆಹಾರವೇ ಅವರಿಗೆ ಇಷ್ಟ! ನೈವೇದ್ಯಕ್ಕೆ ಅನರ್ಹವಾದ ದುರ್ವಾಸನೆಯಿಂದ ಕೂಡಿದ ಆಹಾರವೇ ಅವರಿಗೆ ಬೇಕು. ಬೀದಿಯಲ್ಲಿ ಮಾರುವ ಆಹಾರವು ಮೃತ್ಯುದ್ವಾರವೆಂದು ಸ್ವಾಮಿ ವಿವೇಕಾನಂದರು ಅಭಿಪ್ರಾಯಪಡುತ್ತಾರೆ. ಅವರು ಹೇಳುತ್ತಾರೆ: ''ಹೆಚ್ಚು ಪೌಷ್ಟಿಕವಾದ ಆಹಾರವನ್ನು ಸ್ವೀಕರಿಸಬೇಕು. ಬೃಹತ್ ಪ್ರಮಾಣದಲ್ಲಿ ಅನ್ನದಿಂದ ಹೊಟ್ಟೆಯನ್ನು ತುಂಬಿಸುವುದು ಸೋಮಾರಿತನಕ್ಕೆ ಮೂಲ.'' ಆಹಾರದ ವಿಷಯದಲ್ಲಿ ಮೂರು ಮುಖ್ಯ ಅಂಶಗಳನ್ನು ಗಮನಿಸಬೇಕು: ಹಿತಭುಕ್, ಮಿತಭುಕ್ ಮತ್ತು ಋತಭುಕ್. ದೇಹಕ್ಕೂ ಮನಸ್ಸಿಗೂ ಹಿತವಾದ ಆಹಾರವನ್ನು ಸ್ವೀಕರಿಸಬೇಕು. ಆದರೆ ಅದು ಮಿತವಾಗಿಯೂ ಇರಬೇಕು ಅಷ್ಟೇ ಅಲ್ಲದೆ, ಆಹಾರವು ಋಜುಮಾರ್ಗದಿಂದ ಪಡೆದುದಾಗಿರಬೇಕು – ಅನ್ಯಾಯದಿಂದ ಸಂಪಾದಿಸಿದ ಹಣದಿಂದ ಪಡೆದುದಾಗಿರಬಾರದು.

ಇನ್ನು ಮೂರು ಬಗೆಯ ಶ್ರದ್ಧಾವಂತರು ಮಾಡುವ ಯಜ್ಞದ ವೈವಿಧ್ಯವನ್ನು ಶ್ರೀಕೃಷ್ಣನು ವಿವರಿಸುತ್ತಾನೆ. ಇಲ್ಲಿ ಯಜ್ಞವೆಂದರೆ ಪೂಜೆ, ಹೋಮ, ವಿವಿಧ ವ್ರತಗಳು ಇವೇ ಮುಂತಾದ ಧಾರ್ಮಿಕ ಕ್ರಿಯೆಗಳು ಎಂದು, ಈಗಿನ ಸಂದರ್ಭಕ್ಕೆ ಅನುಗುಣವಾಗಿ, ನಾವು ಪರಿಗಣಿಸಬಹುದು. ಸಾತ್ತ್ವಿಕರು ಫಲಾಕಾಂಕ್ಷೆಯಿಲ್ಲದೆ, ನಿಯಮಾನುಸಾರವಾಗಿ, ಶಿಸ್ತುಬದ್ಧವಾಗಿ ಇವುಗಳನ್ನು ಆಚರಿಸುತ್ತಾರೆ. ಇವುಗಳನ್ನು ಆಚರಿಸುವುದು ತಮ್ಮ ಆಧ್ಯಾತ್ಮಿಕ ಒಳಿತಿಗಾಗಿಯೇ ಹೊರತು ಪ್ರತಿಷ್ಠೆಗಾಗಿಯೂ ಅಲ್ಲ , ಪ್ರಶಂಸೆಗಾಗಿಯೂ ಅಲ್ಲ , ಬೇರೆ ಯಾವುದೇ ಪ್ರಾಪಂಚಿಕ ಗಳಿಕೆಗಾಗಿಯೂ ಅಲ್ಲ. ಈ ರೀತಿಯ ಧರ್ಮಾಚರಣೆಯಿಂದ ಮನಸ್ಸು ಪರಿಶುದ್ಧವಾಗುತ್ತದೆ ಮತ್ತು ಅಂತರ್ಮುಖವಾಗುತ್ತದೆ. ಸಾಮಾಜಿಕ ಪ್ರತಿಷ್ಠೆಗಾಗಿಯೂ, ಫಲಾಪೇಕ್ಷೆಯಿಂದಲೂ ಆಚರಿಸುವ ಯಜ್ಞ ರಾಜಸಿಕವಾದುದು. ರೋಗನಿವಾರಣೆಗಾಗಿ ಕೆಲವರು ಗಣಹೋಮ ಮುಂತಾದವುಗಳನ್ನು ಮಾಡುತ್ತಾರೆ. ಕೆಲವರು ವಿಶೇಷ ಶಕ್ತಿಯನ್ನು ಪಡೆಯಲು ವಿವಿಧ ಪೂಜೆ ಪಾರಾಯಣಗಳನ್ನು ಮಾಡುತ್ತಾರೆ, ಎಷ್ಟೋ ಮಂದಿ ಪ್ರಾಪಂಚಿಕ ಉದ್ದೇಶವನ್ನು ಇಟ್ಟುಕೊಂಡು ಗೀತಾಪಾರಾಯಣ ಮಾಡುವವರೂ ಇದ್ದಾರೆ. ಇವರು ವಿಧಿವತ್ತಾಗಿಯೇ ಮಾಡುತ್ತಾರೆ, ಏಕೆಂದರೆ ಅವರು ಫಲದ ಕಡೆಗೆ ಮನಸ್ಸಿಟ್ಟಿರುತ್ತಾರೆ. ಫಲಾಪೇಕ್ಷೆ ಇಲ್ಲದೆಯೂ ವಿಧಿವತ್ತಾಗಿ ಮಾಡುವವರಲ್ಲಿ ಅಪಾರ ನಿಷ್ಠೆ ಇರುತ್ತದೆ. ಅಂಥವರು ಸಾತ್ತ್ವಿಕರು. ಆದರೆ ತಾಮಸಿಕ ಶ್ರದ್ಧೆಯುಳ್ಳವರು ಯಾವುದೇ ನಿಯಮ ಶಿಸ್ತುಗಳಿಲ್ಲದೆ, ಮಂತ್ರವನ್ನು ಸರಿಯಾಗಿ ಉಚ್ಚರಿಸದೆ, ಮತ್ತು ನಿಷ್ಠೆಯಿಲ್ಲದೆ ಧಾರ್ಮಿಕ ಕ್ರಿಯೆಗಳನ್ನು ಆಚರಿಸುತ್ತಾರೆ. ಇವರಲ್ಲಿ ಫಲಾಪೇಕ್ಷೆ ಇದ್ದರೂ ಅಸಡ್ಡೆಯಿಂದ ಆಚರಿಸುವುದರಿಂದ ನಿಷ್ಫಲವಾಗುತ್ತದೆ, ಅಲ್ಲದೆ ಅದರಿಂದ ಅವರಿಗೆ ಅನಿಷ್ಟವೂ ಉಂಟಾಗಬಹುದು. ನಚಿಕೇತನ ತಂದೆಯು ಯಜ್ಞದ ಸಮಯದಲ್ಲಿ ಕೆಲಸಕ್ಕೆ ಬಾರದ ಹಸುಗಳನ್ನು ದಾನ ಮಾಡಿದನೆಂದು ಕಠೋಪನಿಷತ್ತಿನಲ್ಲಿ ಬರುತ್ತದೆ. ಇಂತಹ ಯಜ್ಞ ತಾಮಸಿಕವಾದುದು. ಧಾರ್ಮಿಕ ಕ್ರಿಯೆಗಳು ಆಧ್ಯಾತ್ಮಿಕ ಜೀವನದ ಮೊದಲನೆಯ ಹಂತಗಳು. ಇವುಗಳನ್ನು

ನಿಷ್ಠೆಯಿಂದ ಮಾಡಿದರೆ, ಸಾತ್ತ್ವಿಕ ಭಾವದಿಂದ ಮಾಡಿದರೆ ಅವು ನಮ್ಮನ್ನು ಮುಂದಿನ ಹಂತಕ್ಕೆ ಕೊಂಡೊಯ್ಯುತ್ತವೆ. ವೈದಿಕ ಧರ್ಮವು ಯಜ್ಞಯಾಗಾದಿ ಕ್ರಿಯೆಗಳಿಂದ ಪ್ರಾರಂಭವಾಗಿ ಉಪನಿಷತ್ ತತ್ತ್ವಾನುಭವದಲ್ಲಿ ಪರ್ಯವಸಾನಗೊಳ್ಳುತ್ತದೆ. ಇದು ಕ್ರಿಯೆಯ ಮೂಲಕ ಕ್ರಿಯೆಯನ್ನು ಮೀರಿಹೋಗುವ ಒಂದು ವ್ಯವಸ್ಥೆ.

ಈಗ ಮೂರು ವಿಧದ ತಪಸ್ಸಿನ ಬಗ್ಗೆ ಹೇಳುತ್ತಾನೆ: ಕಾಯಿಕ, ವಾಚಿಕ ಮತ್ತು ಮಾನಸಿಕ. ಗುರುಹಿರಿಯರನ್ನು ಗೌರವಿಸುವುದು, ಶುಚಿಯಾಗಿರುವುದು, ಬ್ರಹ್ಮಚರ್ಯವನ್ನು ಪಾಲಿಸುವುದು ಮತ್ತು ಅಹಿಂಸೆ – ಇವು ಕಾಯಿಕ ತಪಸ್ಸು. ಕಾಯಿಕ ತಪಸ್ಸೆಂದರೆ ದೇಹ ದಂಡನೆಯಲ್ಲ. ಮನೆಯಲ್ಲಿ ತಂದೆತಾಯಿಗಳ ಸೇವೆ ಮಾಡುವುದೇ ದೊಡ್ಡ ತಪಸ್ಸು. ತಾವೂ ಶುಚಿಯಾಗಿದ್ದು, ಮನೆಯೊಳಗೂ ಹೊರಗೂ ಶುಚಿತ್ವವನ್ನು ಕಾಪಾಡುವುದೂ ಒಂದು ದೊಡ್ಡ ತಪಸ್ಸು. ಹಿಂದೂಗಳು ಈ ತಪಸ್ಸನ್ನು ಆಚರಿಸುತ್ತಿದ್ದಿದ್ದರೆ ಸ್ವಚ್ಛ ಭಾರತ ಅಭಿಯಾನವನ್ನು ಹಮ್ಮಿಕೊಂಡು ಸಾವಿರಾರು ಕೋಟಿ ಹಣವನ್ನು ವ್ಯಯಿಸುವ ಸನ್ನಿವೇಶ ಬರುತ್ತಿರಲಿಲ್ಲ. ಬ್ರಹ್ಮಚರ್ಯವೆಂದರೆ ಸಾಮಾನ್ಯ ಅರ್ಥದಲ್ಲಿ ಭೋಗಾಸಕ್ತಿಯ ನಿಗ್ರಹ. ಇದರ ಸಂಪೂರ್ಣನಿಗ್ರಹ ಸನ್ನ್ಯಾಸಿಗಳ ಆದರ್ಶ. ಇತರರೂ ಭೋಗಾಸಕ್ತಿಯನ್ನು ಒಂದು ಹತೋಟಿಯಲ್ಲಿ ಇಟ್ಟುಕೊಳ್ಳುವುದು ವ್ಯಕ್ತಿಯ, ಕುಟುಂಬದ ಮತ್ತು ಸಮಾಜದ ಆರೋಗ್ಯಕ್ಕೆ ಅತ್ಯಾವಶ್ಯಕ. ಸ್ವಚ್ಛಂದ ಪ್ರವೃತ್ತಿ ಸಮಾಜವನ್ನು ಹೇಗೆ ಕಲುಷಿತಗೊಳಿಸುತ್ತದೆಂಬುದು ಎಲ್ಲರಿಗೂ ತಿಳಿದ ವಿಷಯ. ಇತರರನ್ನು ದೈಹಿಕವಾಗಿಯೂ, ಮಾನಸಿಕವಾಗಿಯೂ ನೋಯಿಸದಂತೆ ವರ್ತಿಸುವುದು ಅಹಿಂಸೆ. ಇತರರನ್ನು ನೋಯಿಸದಂತೆ, ಪ್ರಿಯವೂ ಹಿತವೂ ಆದ ಸತ್ಯವಾಕ್ಯವನ್ನು ನುಡಿಯುವುದು ವಾಙ್ಮಯ ತಪಸ್ಸು. ಇಸ್ಲಾಂ ಧರ್ಮಕ್ಕೆ ಸಂಬಂಧಿಸಿದ ಒಂದು ಹೇಳಿಕೆಯ ಪ್ರಕಾರ, ನಾವು ನುಡಿಯುವ ಪ್ರತಿಯೊಂದು ಶಬ್ದವೂ ಮೂರು ದ್ವಾರಗಳ ಮೂಲಕ ಹಾದು ಬರಬೇಕಂತೆ. ಮೊದಲನೆಯ ದ್ವಾರಪಾಲಕನು 'ಇದು ಸತ್ಯವೇ' ಎಂದು ಕೇಳಬೇಕು. ಎರಡನೆಯ ದ್ವಾರಪಾಲಕನು 'ಇದು ಆವಶ್ಯಕವೇ' ಎಂದು ಕೇಳಬೇಕು. ಮೂರನೆಯ ದ್ವಾರಪಾಲಕನು 'ಇದು ದಯಾಪೂರ್ಣವೇ' ಎಂದು ಕೇಳಬೇಕು. 'ಮಾತು ಬೆಳ್ಳಿ, ಮೌನ ಬಂಗಾರ' ಎಂದು ಹೇಳಲಾಗಿದೆ. ಆದರೆ ಸಂದರ್ಭೋಚಿತವಾದ ಮಾತೂ ಬಂಗಾರವಾಗುತ್ತದೆ. ಸ್ವಾಧ್ಯಾಯವೂ ವಾಚಿಕ ತಪಸ್ಸಿನ ಅಡಿಯಲ್ಲಿ ಬರುತ್ತದೆ. ಮನಸ್ಸನ್ನು ಪ್ರಸನ್ನಗೊಳಿಸುವುದು, ಚಿತ್ತವೃತ್ತಿಗಳನ್ನು ನಿಗ್ರಹಿಸುವುದು, ನಿಷೇಧಾತ್ಮಕ ಭಾವಗಳನ್ನು ಹೋಗಲಾಡಿಸುವುದು ಮತ್ತು ಅಹಂಕಾರಕ್ಕೆ ಒಳಗಾಗದೆ ಇರುವುದು ಮಾನಸಿಕ ತಪಸ್ಸು. ಫಲಾಕಾಂಕ್ಷೆಯಿಲ್ಲದೆ ಅಪಾರ ಶ್ರದ್ಧೆಯಿಂದ ಈ ಮೂರು ಬಗೆಯ ತಪಸ್ಸುಗಳನ್ನು ಮಾಡುವುದು ಸಾತ್ತ್ವಿಕ ತಪಸ್ಸು. ಇತರರ ಮಾನ್ಯತೆಯನ್ನು ಬಯಸಿ ಅಹಂಕಾರದಿಂದ ಮಾಡಿದರೆ ಅದು ರಾಜಸಿಕವಾಗುತ್ತದೆ. ತಪ್ಪುಗ್ರಹಿಕೆಯಿಂದ ದೇಹವನ್ನು ಪೀಡಿಸುತ್ತ, ಇತರರಿಗೂ ಹಾನಿಯನ್ನುಂಟು ಮಾಡುತ್ತ ಮಾಡುವ ತಪಸ್ಸು ತಾಮಸಿಕ. ತಪಸ್ಸಿನ ಮುಖ್ಯ ಉದ್ದೇಶ ನಮ್ಮ ಇಚ್ಛಾಶಕ್ತಿಯನ್ನು ಬಲಗೊಳಿಸುವುದು. ಅದು ಮನಸ್ಸಿನ ಶಾಂತತೆಯನ್ನು ಕದಡಬಾರದು ಮತ್ತು ಯಾವುದೇ ರೀತಿಯ ಹಾನಿಯನ್ನೂ ಉಂಟುಮಾಡಬಾರದು. ಇತರರು ನೀಡುವ ಕಷ್ಟಗಳನ್ನು ತಾಳ್ಮೆಯಿಂದ ಸಹಿಸಿಕೊಂಡಿರುವುದೇ ದೊಡ್ಡ ತಪಸ್ಸು. ಇದಕ್ಕಿಂತಲೂ ಹೆಚ್ಚಿನ ತಪಸ್ಸು ಯಾವುದೆಂದರೆ ಅನೈತಿಕ ಪರಿಸರದಲ್ಲಿ ನೈತಿಕತೆಯನ್ನು ಬಿಟ್ಟುಕೊಡದೆ ಬಾಳುವುದು – ಅಂತಹ ಸಂದರ್ಭದಲ್ಲಿ ಉಂಟಾಗುವ ಒಂಟಿತನವನ್ನು ಸಹಿಸಿಕೊಂಡಿರುವುದೇ ಮಹಾ ತಪಸ್ಸು.

ದಾನವೂ ಮೂರು ಬಗೆಯಾಗಿರುತ್ತದೆ ಎಂದು ಶ್ರೀಕೃಷ್ಣನು ಹೇಳುತ್ತಾನೆ. 'ಅಯ್ಯೋ ಕೊಡಬೇಕಲ್ಲ !' ಎಂದು ಕೊಡುವುದಲ್ಲ, ಕೊಡಬೇಕು ಎಂದು ಶ್ರದ್ಧೆಯಿಂದಲೂ ಸೌಜನ್ಯದಿಂದಲೂ ನಮ್ರತೆಯಿಂದಲೂ ಉಪಕಾರ ಮಾಡುವವರಿಗೂ ದಾನ ಮಾಡುವುದು ಸಾತ್ತ್ವಿಕ ದಾನ. ಅಲ್ಲಿ ಪುಣ್ಯ ಸಂಪಾದನೆಯ ಉದ್ದೇಶ ಇರಬಾರದು, ಹಾಗೂ ಮುಂದೆ ತನಗೇನಾದರೂ ದಾನ ಪಡೆದವನಿಂದ ಉಪಕಾರವಾದೀತು ಎಂಬ ಲೆಕ್ಕಾಚಾರ ಬುದ್ಧಿಯೂ ಇರಬಾರದು. ಒಂದು ಕಥೆಯಿದೆ:

ಆತನ ಹೆಸರು ಬಯಾಸಿದ್ ಬುಸ್ತಾಮಿ. ಪರ್ಷಿಯಾ ದೇಶದ ಪ್ರಸಿದ್ಧರಾದ ಸಂತರಲ್ಲಿ ಒಬ್ಬ.

ಒಂದು ಸಲ, ಬುಸ್ತಾಮಿ ಒಂಟಿಯಾಗಿ ಮನೆಗೆ ಬರುತ್ತಿದ್ದ. ಅರ್ಧರಾತ್ರಿ ಮೀರಿತ್ತು. ದಾರಿಯಲ್ಲಿ ಒಬ್ಬ ಕುಡುಕ ತನ್ನ ತಂತೀ ವಾದ್ಯವನ್ನು ನುಡಿಸುತ್ತ ಅಪಸ್ವರದಲ್ಲಿ ಹಾಡುತ್ತಿದ್ದ. ದಾರಿಯಲ್ಲಿ ಬಂದವರನ್ನೆಲ್ಲ ಬಾಯಿಗೆ ಬಂದಹಾಗೆ ಬಯ್ಯುತ್ತಿದ್ದ.

ಕುಡುಕನ ವರ್ತನೆ ಬುಸ್ತಾಮಿಗೆ ಸರಿಬರಲಿಲ್ಲ. ''ಹೀಗೆಲ್ಲಾ ಮಾಡುವುದು ಚೆನ್ನಾಗಿಲ್ಲ '' ಎಂದು ಅವನಿಗೆ ಬುದ್ಧಿ ಹೇಳಿದ.

ಬುಸ್ತಾಮಿಯ ಬುದ್ಧಿವಾದ ಕುಡುಕನಿಗೆ ರುಚಿಸಲಿಲ್ಲ. ಅವನಿಗೆ ಅಸಾಧ್ಯ ರೋಷ ಬಂತು. ಬುಸ್ತಾಮಿಯನ್ನು ಹೊಲಸುಹೊಲಸಾಗಿ ಬಯ್ದ. ತನ್ನ ಕೈಲಿದ್ದ ವಾದ್ಯವನ್ನು ಮೇಲೆತ್ತಿ ಬುಸ್ತಾಮಿಯ ತಲೆಯ ಮೇಲೆ ಹೊಡೆದ. ಹೊಡೆದ ಏಟಿಗೆ ವಾದ್ಯ ಚೂರು ಚೂರಾಯಿತು; ಬುಸ್ತಾಮಿಯ ತಲೆ ಒಡೆದು, ಮುಖದ ಮೇಲೆ ರಕ್ತ ಹರಿಯಿತು.

ಬುಸ್ತಾಮಿ ತುಟಿ ಪಿಟಕ್ ಎನ್ನಲಿಲ್ಲ. ಮುಖದ ಮೇಲಿನ ರಕ್ತವನ್ನು ಕೈಯಿಂದ ಒರಸಿಕೊಳ್ಳುತ್ತಾ ತನ್ನ ದಾರಿ ಹಿಡಿದು ಮನೆಗೆ ಹೋದ. ಕುಡುಕ ಬಾಯಿ ಸೋಲುವವರೆಗೂ ಬೈಯುತ್ತಲೇ ಇದ್ದ.

ಮಾರನೆಯ ಬೆಳಗಾಯಿತು. ಬುಸ್ತಾಮಿ ತನ್ನ ಸೇವಕನನ್ನು ಕರೆದ. ಒಂದು ಬುಟ್ಟಿಯ ತುಂಬ ಮಿಠಾಯಿಗಳನ್ನು ತುಂಬಿದ. ಬುಟ್ಟಿಯನ್ನು ಸೇವಕನ ತಲೆಯ ಮೇಲಿಟ್ಟು, ಅವನ ಕೈಯಲ್ಲಿ ಕೆಲವು ನಾಣ್ಯಗಳನ್ನು ಕೊಟ್ಟ.

''ಇಂತಹ ಕಡೆ ಒಬ್ಬ ಕುಡುಕ ಇದ್ದಾನೆ. ಅವನಿಗೆ ಈ ಮಿಠಾಯಿ ಬುಟ್ಟಿಯನ್ನೂ ಈ ನಾಣ್ಯಗಳನ್ನೂ ಕೊಡು. 'ನೆನ್ನೆ ರಾತ್ರಿ ನನ್ನ ತಲೆಗೆ ತಗುಲಿ ನಿನ್ನ ವಾದ್ಯ ಚೂರುಚೂರಾಯಿತು. ದಯಮಾಡಿ ಈ ಹಣದಿಂದ ನೀನು ಹೊಸ ವಾದ್ಯ ಕೊಂಡುಕೊ. ಮತ್ತೆ ನೆನ್ನೆ ರಾತ್ರಿ ಆಡಬಾರದ ಬೈಗಳನ್ನು ಆಡಿ, ನಿನ್ನ ನಾಲಗೆ ಕೆಟ್ಟುಹೋಗಿತ್ತು. ದಯ

ಮಾಡಿ ಈ ಮಿಠಾಯಿ ತಿಂದು, ನಾಲಗೆಯನ್ನು ಸಿಹಿ ಮಾಡಿಕೊ' ಎಂದು ನಾನು ಹೇಳಿದುದಾಗಿ ಅವನಿಗೆ ತಿಳಿಸು'' ಎಂದು ಬುಸ್ತಾಮಿ ಸೇವಕನನ್ನು ಕಳಿಸಿದ.

ಸೇವಕ ಬಂದು ಕೊಟ್ಟದ್ದನ್ನು ನೋಡಿ ಕುಡುಕನಿಗೆ ತುಂಬ ಅವಮಾನವಾಯಿತು. ಪಶ್ಚಾತ್ತಾಪ ಆಯಿತು. ಕೂಡಲೆ ಅವನು ಬುಸ್ತಾಮಿಯ ಹತ್ತಿರ ಹೋಗಿ, ತಪ್ಪಾಯಿತೆಂದು ಅಡ್ಡ ಬಿದ್ದ. ಅಂದಿನಿಂದ ಕುಡಿಯುವುದನ್ನು ಬಿಟ್ಟುಬಿಟ್ಟ. ನೀತಿ: **'ಪ್ರೀತಿಯೇ ಇತರರನ್ನು ಗೆಲ್ಲುವ ಪರಮಾಸ್ತ್ರ.'** *(ಸಂಗ್ರಹ: 'ವಿಚಾರ ರಶ್ಮಿ'ಯಿಂದ, 'ವಿವೇಕ ಪ್ರಭ', ಏಪ್ರಿಲ್ ೨೦೦೧ ಪು. ೮೦ರಲ್ಲಿ ಪ್ರಕಟಿತ )*

ಪರಾಶರರು ನಾಲ್ಕು ಬಗೆಯ ದಾನವನ್ನು ಹೇಳುತ್ತಾರೆ:

**ಅಭಿಗಮ್ಯ ಉತ್ತಮಂ ದಾನಂ ಆಹೂಯೈವ ತು ಮಧ್ಯಮಮ್ ।**
**ಅಧಮಂ ಯಾಚಮಾನಾಯ ಸೇವಾದಾನಂ ತು ನಿಷ್ಫಲಮ್ ॥**

''ಸ್ವೀಕರಿಸುವವನೆಡೆಗೆ ಹೋಗಿ ದಾನ ಮಾಡುವುದು ಉತ್ತಮ ದಾನ. (ಇದರಲ್ಲಿ ಅಹಂಕಾರದ ಸುಳಿವಿರುವುದಿಲ್ಲ.) ಮನೆಗೆ ಕರೆದು ದಾನ ಮಾಡುವುದು ಮಧ್ಯಮ ವರ್ಗದ್ದು. (ಇಲ್ಲಿ ಸ್ವೀಕರಿಸುವವನು ನೀಡುವವನಿಗಿಂತ ಸಣ್ಣವನಾಗುತ್ತಾನೆ.) ಬೇಡಿ ಬಂದವನಿಗೆ ದಾನ ಮಾಡುವುದು ಅಧಮದಾನ. (ಇಲ್ಲಿ ದಾನಮಾಡುವ ಪ್ರವೃತ್ತಿಯೇ ಇಲ್ಲದಿರಬಹುದು.) ಅತ್ಯಂತ ಕೆಳಮಟ್ಟದ ದಾನ ಯಾವುದೆಂದರೆ, ಸೇವೆ ಮಾಡಿದವನಿಗೆ, ಅಥವಾ ಅದನ್ನು ಮುಂದೆ ನಿರೀಕ್ಷಿಸಿ, ದಾನ ಮಾಡುವುದು.'' ಶ್ರದ್ಧಾಪೂರ್ವಕ ದಾನಮಾಡಿದಾಗ ಹೃದಯವು ಸಾರ್ಥಕತೆಯ ಭಾವದಿಂದ ತುಂಬುತ್ತದೆ. ''ಜೇಬು ಖಾಲಿಯಾದಂತೆಲ್ಲ ಹೃದಯ ತುಂಬುತ್ತದೆ'' – ಎನ್ನುತ್ತಾರೆ ವಿಕ್ಟರ್ ಹ್ಯೂಗೊ.

ಈ ಸಂದರ್ಭದಲ್ಲಿ ಸ್ವಾಮಿ ಅದ್ಭುತಾನಂದರ ಮಾತು ಸ್ಮರಣಾರ್ಹ: ''ದಾನ ಮಾಡುವುದೂ ಒಂದು ರೀತಿಯ ಭಗವತ್ಸೇವೆ. ಸಂಸಾರಿಗಳು ಮಾನ, ಯಶಸ್ಸು, ಅಥವಾ ಸ್ವರ್ಗವನ್ನು ಬಯಸದೆ ಯಾರಿಗಾದರೂ ದಾನವನ್ನು ಮಾಡಿದರೆ, ಹಾಗೂ ಉಪಕೃತರಿಂದ ಯಾವ ರೀತಿಯ ಪ್ರತ್ಯುಪಕಾರವನ್ನೂ ಬಯಸದಿದ್ದರೆ, ಆಗ ಆ ದಾನದಿಂದ ಭಗವಂತನು ಸಂತುಷ್ಟನಾಗುತ್ತಾನೆ. ನೀವು ಏನು ದಾನ ಮಾಡುತ್ತೀರೋ ಅದರಿಂದ ಭಗವಂತನ ಸೇವೆಯೇ ಆಗುತ್ತದೆ.''

ದಾನಮಾಡುವಾಗಲೂ ದೇಶ ಕಾಲ ಪಾತ್ರಗಳನ್ನು ಪರಿಗಣಿಸಬೇಕು. ಶ್ರಮದಾನವನ್ನು ಎಲ್ಲಿ ಆವಶ್ಯಕವೋ ಅಲ್ಲಿ ಮಾಡಬೇಕು (ದೇಶ). ಅನ್ನದಾನವನ್ನು ಕೊಳಕು ಪ್ರದೇಶದಲ್ಲಿ ಮಾಡುವುದಲ್ಲ. ಸಂಕಟಕಾಲದಲ್ಲಿ ಮಾಡಿದ ಸಹಾಯ ಹೆಚ್ಚು ಮಹತ್ವವುಳ್ಳದ್ದಾಗುತ್ತದೆ (ಕಾಲ). ಯಾರಿಗೆ ಆವಶ್ಯಕವೋ ಅವರಿಗೆ ನೀಡಬೇಕು (ಪಾತ್ರ). ಕುಡುಕನಿಗೆ ಹಣ ನೀಡಿದರೆ ಅವನು ಅದನ್ನು ಕುಡಿಯುವುದಕ್ಕೇ ಉಪಯೋಗಿಸಿಕೊಳ್ಳುತ್ತಾನೆ. ಕೊಡಬೇಕಲ್ಲ ಎಂದು ಯಾರೆಂದರೆ ಅವರಿಗೆ ಏನನ್ನಾದರೂ ನೀಡುವುದರಲ್ಲಿ ಅರ್ಥವಿಲ್ಲ. ಕೆಲವೊಮ್ಮೆ ಅತ್ಯುತ್ಸಾಹದಿಂದ ಸೇವೆ ಮಾಡಲು ಹೋಗಿ ಆ ಸೇವೆ ದುಃಸೇವೆಯೇ (Dis-service) ಆಗುವುದುಂಟು. ಇದಕ್ಕೆ ಸಂಬಂಧಪಟ್ಟಂತೆ ಸ್ವಾಮಿ ಯತೀಶ್ವರಾನಂದರು ತಮ್ಮ ಜೀವನದ ಒಂದು ಘಟನೆಯನ್ನು ಹೇಳುತ್ತಾರೆ. ಅವರು ವಿದ್ಯಾರ್ಥಿಗಳಾಗಿದ್ದಾಗ ತಮ್ಮ ಸ್ನೇಹಿತರೊಡನೆ ಸ್ವಾಮಿ ಬ್ರಹ್ಮಾನಂದರ ಹಿತನುಡಿಗಳನ್ನು ಕೇಳಲು ಹೋಗುತ್ತಿದ್ದರು. ಒಂದು ದಿನ ಬ್ರಹ್ಮಾನಂದರು ಸೇವೆಯ ಬಗ್ಗೆ ಮಾತನಾಡುತ್ತ ಅವರಲ್ಲಿ ಸೇವೋತ್ಸಾಹವನ್ನು ಕೆರಳಿಸಿದರು. ಅವರು ಮನೆಗೆ ಹಿಂತಿರುಗಿ ಹೋಗುವಾಗ ಬೀದಿಯ ಬದಿಯಲ್ಲಿ ಒಂದು ನಾಯಿ ಗಾಯದಿಂದ ನರಳುತ್ತಿರುವುದನ್ನು ಕಂಡರು. ಯತೀಶ್ವರಾನಂದರು ಮತ್ತವರ ಸ್ನೇಹಿತರು ಈ ಸೇವೆಯ ಅವಕಾಶವನ್ನು ಕಳೆದುಕೊಳ್ಳಬಾರದೆಂದು, ಕೂಡಲೇ ಲ್ಯಾಬೋರೇಟರಿಗೆ ಹೋಗಿ ಗಾಯಕ್ಕೆ ಹಾಕುವ ಔಷಧಿಯನ್ನು ತಂದರು. ಗಾಯವನ್ನು ತೊಳೆದು ಔಷಧಿಯನ್ನು ಹಾಕಿ ಚಿಕಿತ್ಸೆ ಮಾಡಿ ತೃಪ್ತಿಯಿಂದ ಮನೆಗೆ ಹಿಂದಿರುಗಿದರು. ಆದರೆ ಸ್ವಲ್ಪ ಸಮಯದ ನಂತರ ಬಂದು ನೋಡಿದಾಗ ಆ ನಾಯಿ ಸತ್ತುಹೋಗಿತ್ತು! ಅದು ಗಾಯವನ್ನು ನೆಕ್ಕಿಕೊಂಡಿದ್ದರಿಂದ ಔಷಧಿಯ ವಿಷ ಅದರ ಸಾವಿಗೆ ಕಾರಣವಾಗಿತ್ತು.

ಈ ಯಾವ ಆದರ್ಶಗಳೂ ಇಲ್ಲದೆ, ಔದಾರ್ಯವೂ ಇಲ್ಲದೆ ಮಾಡಿದ ದಾನವು ರಾಜಸಿಕವೂ, ತಾಮಸಿಕವೂ ಆಗಿರುತ್ತದೆ.

ಅಧ್ಯಾಯದ ಕೊನೆಯಲ್ಲಿ ಶ್ರೀಕೃಷ್ಣನು ಒಂದು ಬಹುಮುಖ್ಯ ವಿಷಯವನ್ನು ಹೇಳುತ್ತಾನೆ. **ಓಂ, ತತ್, ಸತ್**, ಈ ಮೂರು ಪರಬ್ರಹ್ಮನನ್ನು ನಿರ್ದೇಶಿಸುವ ಪದಗಳು. ಇವುಗಳಲ್ಲಿ ಓಂಕಾರವು ಎಲ್ಲರಿಗೂ ತಿಳಿದಿರುವಂತೆ, ಅತ್ಯಂತ ಶ್ರೇಷ್ಠವಾದ ಪರಬ್ರಹ್ಮವಾಚಕ ಶಬ್ದ. '**ತತ್**' ಆ ಭಗವಂತನನ್ನೇ ಸೂಚಿಸುತ್ತದೆ. **ತತ್ ತ್ವಂ ಅಸಿ** ಎಂಬ ಮಹಾವಾಕ್ಯದಲ್ಲಿ **ತತ್** ಪದವು ಈಶ್ವರನನ್ನೇ ನಿರ್ದೇಶಿಸುತ್ತದೆ. ನಾರದರು 'ಭಕ್ತಿ' ಪದವನ್ನು ನಿರ್ವಾಚಿಸುವಾಗ '**ಅಸ್ಮಿನ್**' ಎಂಬ ಸರ್ವನಾಮವನ್ನೇ ಭಗವದ್‌ಸೂಚಕವಾಗಿ ಬಳಸುತ್ತಾರೆ. ಶ್ರೀಧರರು ತಮ್ಮ ಟೀಕೆಯಲ್ಲಿ ಹೇಳುತ್ತಾರೆ: **ಜಗತ್ ಕಾಣತ್ವೇನ ಪ್ರಸಿದ್ಧತ್ವಾತ್, ಅವಿದುಷಾಂ ಪರೋಕ್ಷತ್ವಾತ್ ಚ ತತ್ ಶಬ್ದೋಪಿ ಬ್ರಹ್ಮಣಃ ನಾಮ ।** – ''ಜಗತ್ತಿನ ಕಾರಣವೆಂದು ಪ್ರಸಿದ್ಧವಾಗಿರುವುದರಿಂದಲೂ ಅಜ್ಞಾನಿಗಳಿಗೆ ನೇರವಾಗಿ ನಿಲುಕದುದರಿಂದಲೂ **ತತ್** ಶಬ್ದವು ಬ್ರಹ್ಮದ ಹೆಸರು.'' 'ಬ್ರಹ್ಮಸೂತ್ರ' ದ ಎರಡನೆಯ ಸೂತ್ರವೂ '**ಜನ್ಮಾದ್ಯಸ್ಯ ಯತಃ**' – ಯಾವುದರಿಂದ ಈ ಜಗತ್ತಿನ ಸೃಷ್ಟಿಸ್ಥಿತಿಲಯಗಳು ಉಂಟಾಗುತ್ತವೆಯೋ ಅದು (ತತ್) ಬ್ರಹ್ಮ ಎಂದು ಹೇಳುತ್ತದೆ. ಅಜ್ಞಾನಿಗಳಿಗೆ ದೂರವಾಗಿರುವುದರಿಂದ '**ಅದು**' (ತತ್) ಎಂದು (ಇದು ಅಲ್ಲ) ಬ್ರಹ್ಮನನ್ನು ನಿರ್ದೇಶಿಸಲಾಗಿದೆ. ಹಾಗೆಯೇ ಉಪನಿಷತ್ತುಗಳಲ್ಲಿ ಆತ್ಯಂತಿಕ ವಸ್ತುವನ್ನು **ಸತ್** ಎಂದು ನಿರ್ದೇಶಿಸಲಾಗಿದೆ. ಛಾಂದೋಗ್ಯ ಉಪನಿಷತ್ತಿನಲ್ಲಿ **ಸದೇವ ಸೌಮ್ಯ ಇದಮಗ್ರ ಆಸೀತ್** ('ಪ್ರಾರಂಭದಲ್ಲಿ ಸತ್ ಒಂದೇ ಇತ್ತು') ಎಂಬ ವಾಕ್ಯ ಬರುತ್ತದೆ.

ಬ್ರಹ್ಮವಾದಿಗಳು ಯಜ್ಞದಾನತಪಃಕ್ರಿಯೆಗಳನ್ನು, ಅಂದರೆ ಎಲ್ಲ ಧಾರ್ಮಿಕ ಕ್ರಿಯೆಗಳನ್ನು, ಓಂಕಾರದೊಂದಿಗೆ ನಿರ್ವಹಿಸುತ್ತಾರೆ ಎಂದು ಶ್ರೀಕೃಷ್ಣನು ಹೇಳುತ್ತಾನೆ. '**ತತ್**' ಎಂದು ಹೇಳುವುದರ ಮೂಲಕ ಎಲ್ಲ ಫಲಗಳು ಅವನಿಗೇ ಸೇರಿದುದೆಂದು ಭಾವಿಸುತ್ತ ಫಲಾಪೇಕ್ಷೆಯಿಲ್ಲದೆ ಎಲ್ಲ ಕರ್ಮಗಳನ್ನು ಅವರು ನಿರ್ವಹಿಸುತ್ತಾರೆ. '**ತತ್**' ಎಂಬ ಶಬ್ದವೇ ಅನಾಸಕ್ತಿಯ ಭಾವವನ್ನು ಸೂಚಿಸುತ್ತದೆ.

‘ಸದ್ಭಾವ’, ‘ಸಾಧುಭಾವ’, ‘ಸತ್ಕರ್ಮ’ ಮುಂತಾದ ಶಬ್ದಗಳನ್ನು ನಾವು ಬಳಸುತ್ತೇವೆ. ‘**ಸತ್**’ ಶಬ್ದವು ಒಳ್ಳೆಯದೆಲ್ಲವನ್ನೂ ಸೂಚಿಸುತ್ತದೆ. ಈ ಮೂರೂ ಪವಿತ್ರ ಪದಗಳು. ಆದ್ದರಿಂದ ಶಂಕರಾಚಾರ್ಯರು ತಮ್ಮ ಭಾಷ್ಯದಲ್ಲಿ ಬರೆಯುತ್ತಾರೆ:

**ತದೇತತ್ ಯಜ್ಞದಾನತಪಆದಿಕರ್ಮ ಅಸಾತ್ತ್ವಿಕಂ ವಿಗುಣಂ ಅಪಿ ಶ್ರದ್ಧಾಪೂರ್ವಕಂ ಬ್ರಹ್ಮಣಃ ಅಭಿಧಾನತ್ರಯಪ್ರಯೋಗೇಣ ಸಗುಣಂ ಸಾತ್ತ್ವಿಕಂ ಸಂಪಾದಿತಂ ಭವತಿ** – ‘‘ಯಜ್ಞದಾನತಪಸ್ ಮುಂತಾದ ಕರ್ಮಗಳು ಅಸಾತ್ತ್ವಿಕವೂ ದೋಷಪೂರ್ಣವೂ ಆಗಿದ್ದರೂ ಕೂಡ ಬ್ರಹ್ಮದ ಈ ಮೂರು ಹೆಸರುಗಳನ್ನು ಹೊಂದಿಸಿ ಆಚರಿಸಿದರೆ ಅವು ಸಾತ್ತ್ವಿಕವೂ ಸಗುಣವೂ ಆಗುತ್ತವೆ.’’ ಇಲ್ಲಿ ಶ್ರೀಮಾತೆ ಶಾರದಾದೇವಿಯವರ ಜೀವನದ ಘಟನೆಯೊಂದನ್ನು ಸ್ಮರಿಸಿಕೊಳ್ಳಬಹುದು. ನಳಿನಿ ಎಂಬುವವಳು ಏನೋ ಹೊಲಸನ್ನು ಮೆಟ್ಟಿಕೊಂಡು ಮನೆಗೆ ಬಂದಿದ್ದಳು. ಆಗ ಚಳಿಗಾಲ ಮತ್ತು ರಾತ್ರಿ. ಅವಳು ಸ್ನಾನ ಮಾಡಲೇಬೇಕೆಂದು ಹಟಹಿಡಿದಳು. ಅವಳದು ತುಂಬ ಮಡಿವಂತಿಕೆ. ಎಷ್ಟೇ ಬೇಡವೆಂದರೂ ಕೇಳದಿದ್ದಾಗ ಶ್ರೀಮಾತೆ ಒಂದು ಪರಿಹಾರವನ್ನು ಸೂಚಿಸಿದರು. ಅವರು ಹೇಳಿದರು, ‘ನನ್ನನ್ನು ಮುಟ್ಟು’ ಎಂದು. ಅವರ ದೇಹ ಅತ್ಯಂತ ಪವಿತ್ರವಾದುದರಿಂದ ಅದರ ಸ್ಪರ್ಶದಿಂದ ಎಲ್ಲ ಅಶುಚಿಯೂ ಶುಚಿಯಾಗಿಬಿಡುತ್ತದೆ. ಅದರಂತೆಯೇ ಈ ಮೂರು ಪದಗಳೂ ಕೂಡ.

**ತತ್** ಪದವು ದೂರದ ವಸ್ತುವನ್ನು ಸೂಚಿಸುವುದರಿಂದ ಆತ್ಯಂತಿಕ ಸತ್ಯದ ಪ್ರಪಂಚಾತೀತ ಸ್ಥಿತಿಯನ್ನು (transcendental) ಸೂಚಿಸುತ್ತದೆ ಎಂದು ಹೇಳಬಹುದು. **ಸತ್** ಪದವು ಅದೇ ಸತ್ಯದ ಜಗದ್ರೂಪವನ್ನು ಸೂಚಿಸುತ್ತದೆ. ಆದ್ದರಿಂದಲೇ ನಮಗೆ ಘಟವಿದೆ, ಪಟವಿದೆ, ಎಲ್ಲವೂ ಇದೆ ಎಂದು, ಇಡೀ ಜಗತ್ತು ಇದೆ ಎಂದು ತೋರಿಬರುತ್ತದೆ. ಅದರಿಂದಾಗಿಯೇ ವ್ಯವಹಾರ ಸಾಧ್ಯವಾಗುತ್ತದೆ. ಆ ಅತೀತ ಸತ್ಯ ಜಗತ್ತಿನೊಳಗೆ ಹಾಸುಹೊಕ್ಕಾಗಿರುವುದರಿಂದ (‘**ತತ್‌ಸೃಷ್ಟ್ವಾ ತದೇವಾನುಪ್ರಾವಿಶತ್**’) ಈ ಜಗತ್ತಿಗೆ ಸತ್ಯತೆ ಬಂದಿರುವುದು. ಆದ್ದರಿಂದ ಆ ಅತೀತ ಸತ್ಯವು ವಿಶ್ವಾತೀತವೂ ಹೌದು, ವಿಶ್ವವ್ಯಾಪಿಯೂ ಹೌದು. ಓಂಕಾರವು ಈ ಭಾವನೆಯನ್ನು ವ್ಯಕ್ತಪಡಿಸುತ್ತದೆ. ಮಾಂಡೂಕ್ಯ ಉಪನಿಷತ್ತಿನ ಪ್ರಕಾರ, ಓಂಕಾರದ ‘ಅ’ಕಾರವು ಜಾಗ್ರದವಸ್ಥೆಯನ್ನು ಸೂಚಿಸುತ್ತದೆ. ಬಾಯನ್ನು ವಿಸ್ತರಿಸಿ ಅಕಾರವನ್ನು ಉಚ್ಚರಿಸುತ್ತೇವೆ. ಹಾಗೆಯೇ ಜಾಗ್ರದವಸ್ಥೆಯಲ್ಲಿ ಜಗತ್ತು ವಿಸ್ತಾರವಾಗಿ ಹರಡಿಕೊಂಡಿರುತ್ತದೆ. ಓಂಕಾರದ ‘ಉ’ಕಾರ ಸ್ವಪ್ನಾವಸ್ಥೆಯನ್ನು ಪ್ರತಿನಿಧಿಸುತ್ತದೆ. ‘ಉ’ಕಾರವನ್ನು ಬಾಯನ್ನು ಸಂಕೋಚಗೊಳಿಸಿ ಉಚ್ಚರಿಸುತ್ತೇವೆ. ಹಾಗೆಯೇ ಸ್ವಪ್ನಾವಸ್ಥೆಯಲ್ಲಿ ಜಗತ್ತು ಮನೋರಾಜ್ಯಕ್ಕೆ ಸಂಕೋಚಗೊಳ್ಳುತ್ತದೆ. ಓಂಕಾರದ ‘ಮ’ ಕಾರವು ಸುಷುಪ್ತಾವಸ್ಥೆಯನ್ನು ಸಂಕೇತಿಸುತ್ತದೆ. ಮಕಾರದ ಉಚ್ಚಾರಣೆಯೊಂದಿಗೆ ಧ್ವನಿಯು ನಿಂತು ಹೋಗುತ್ತದೆ. ಹಾಗೆಯೇ ಸುಷುಪ್ತಾವಸ್ಥೆಯಲ್ಲಿ ಎಲ್ಲ ಪ್ರಪಂಚಾನುಭವವೂ ನಿಂತು ಹೋಗುತ್ತದೆ (‘**ಪ್ರಪಂಚೋಪಶಮಂ**’). ಓಂಕಾರೋಚ್ಚಾರಣೆಯ ನಂತರವೂ ಅವ್ಯಕ್ತ ಸ್ಪಂದನವು ಮುಂದುವರಿಯುತ್ತದೆ. ಇದು ತುರೀಯವನ್ನು ಸೂಚಿಸುತ್ತದೆ. ಹೀಗಾಗಿ ಓಂಕಾರವು ಪೂರ್ಣ ಸತ್ಯದ ಒಂದು ಪರಿಪೂರ್ಣ ಸಂಕೇತ. ಇಂತಹ ಆಸ್ತಿಕ್ಯ ಬುದ್ಧಿಯನ್ನೇ **ಶ್ರದ್ಧೆ** ಎಂದು ಕರೆಯಲಾಗಿದೆ. *

## ದಾಟುವುದು (ಬುದ್ಧ ಹೇಳಿದ ಕಥೆ)

‘‘ಪ್ರಯಾಣಿಕನೊಬ್ಬನು ಹಾದಿಯಲ್ಲಿ ಹೋಗುತ್ತಿದ್ದಾಗ ನೀರಿನ ಹರಹನ್ನು ಕಂಡನಂತೆ. ಅದರ ಈಚೆ ದಡವು ಅಪಾಯ ಭಯದಿಂದ ಕೂಡಿದೆ; ಆಚೆಯ ದಡ ಕ್ಷೇಮಕರವಾಗಿ ನಿರ್ಭಯವಾಗಿದೆ. ಅಲ್ಲಿ ಆ ಜಲರಾಶಿಯನ್ನು ದಾಟಲು ದೋಣಿಯಾಗಲೀ ಸೇತುವೆಯಾಗಲೀ ಇಲ್ಲದೆ, ದೂರ ಪ್ರದೇಶಕ್ಕೆ ಹೋಗಲು ಅವಕಾಶವಿಲ್ಲದಂತಾಗಿತ್ತು . ಆಗ ಅವನಿಗೆ ಅಪಾಯಕರವಾದ ಆ ದಡವನ್ನು ಬಿಟ್ಟು ಕ್ಷೇಮಕರವಾದ ದಡಕ್ಕೆ ಹೋಗಲು ಜೊಂಡುಗಳನ್ನು ಸೇರಿಸಿ ತೆಪ್ಪ ಕಟ್ಟಿಕೊಂಡು ಕೈಕಾಲುಗಳಿಂದ ಅದನ್ನು ತಳ್ಳುತ್ತಾ ಆ ಜಲ ರಾಶಿಯನ್ನು ದಾಟಿಬಿಡಬೇಕು ಎನ್ನಿಸಿರಬೇಕು. ಆ ರೀತಿ ಮಾಡಿ ಹೊಳೆ ದಾಟಿದ ಬಳಿಕ ಈ ತೆಪ್ಪ ನನಗ ಬಹಳ ಸಹಾಯ ಮಾಡಿದೆ. ಆದ್ದರಿಂದ ಅದನ್ನೂ ನನ್ನ ಜೊತೆಯಲ್ಲಿ ಕೊಂಡೊಯ್ಯಬೇಕು ಎಂಬ ಮೋಹವುಂಟಾಗುವುದು. ಭಿಕ್ಷುಗಳೆ, ಅವನು ಹಾಗೆ ಮಾಡಿದರೆ ಅದು ವಿವೇಕವೆ?’’

‘‘ಅಲ್ಲ, ಪ್ರಭು.’’

‘‘ಭಿಕ್ಷುಗಳೆ, ಹಾಗಾದರೆ ಅವನು ಆ ತೆಪ್ಪವನ್ನು ಏನು ಮಾಡಬೇಕು? ‘ಇದನ್ನು ದಡದ ಮೇಲೆಯೇ ಬಿಟ್ಟು ಹೋಗಲೋ ಅಥವಾ ಹೊಳೆಯಲ್ಲೇ ಮುಳುಗಿಸಿ ಬಿಡಲೋ’ ಎಂದು ಯೋಚಿಸಿ ಏನೋ ಒಂದನ್ನು ಮಾಡುತ್ತಾನೆ. ಈ ರೀತಿ ತೆಪ್ಪ ನದಿಯನ್ನು ದಾಟಿ ಹೋಗಲು ಮಾತ್ರ, ಜೊತೆಯಲ್ಲಿ ತೆಗೆದುಕೊಂಡು ಹೋಗುವುದಕ್ಕಲ್ಲ ಎಂಬ ನೀತಿಕಥೆ ನಿಮಗೆ ಮನದಟ್ಟಾಗಿರಬಹುದು. ಈ ತೆಪ್ಪದ ನೀತಿಕಥೆಯನ್ನು ಸರಿಯಾಗಿ ಅರ್ಥ ಮಾಡಿಕೊಂಡು ನೀವು ಒಳ್ಳೆಯ ಮನೋಭಾವವನ್ನೂ ಕೂಡ ತ್ಯಜಿಸಬೇಕು. ಕೆಟ್ಟ ಮನಃಸ್ಥಿತಿಗಳ ವಿಷಯವಾಗಿ ಬೇರೆ ಹೇಳಬೇಕೆ?’’

*(‘**ಗೌತಮ ಬುದ್ಧ**’, ಪು.೨೦೧–೨, ಆನಂದ ಕುಮಾರಸ್ವಾಮಿ ಮತ್ತು ಹಾರ್ನರ್, ನ್ಯಾಷನಲ್ ಬುಕ್ ಟ್ರಸ್ಟ್, ೧೯೬೮)*

ಸಂತರ ಜೀವನ ಕಥೆ

# ರಬಿಯಾ – ದೇವರ ಮಗಳು

ಸ್ವಾಮಿ ವೀರೇಶಾನಂದ



ಭಾರತೀಯ ಆಧ್ಯಾತ್ಮಿಕ ವಿಚಾರಗಳಿಂದ ಪ್ರಭಾವಿತವಾದ ಸೂಫೀ ಪಂಥದ ಗಮನಾರ್ಹ ಸಂತರಲ್ಲಿ ಒಬ್ಬಾಕೆ ರಬಿಯಾ. ಅವಳ ಜೀವನದ ಅಸಾಧಾರಣ ಕಥೆಯನ್ನು ನವಿರಾಗಿ ಚಿತ್ರಿಸಿರುವ ಲೇಖಕರು ನುರಿತ ವಿದ್ವಾಂಸರೂ, ಉತ್ತಮ ಭಾಷಣಕಾರರೂ, ಲೇಖಕರೂ ಆಗಿದ್ದಾರೆ. '**ವಿವೇಕಪ್ರಭ**'ದ ಹಿಂದಿನ ಸಂಪಾದಕರಾಗಿದ್ದ ಅವರು ಪ್ರಸ್ತುತ ಬೇಲೂರು ಮಠದ 'ಬ್ರಹ್ಮಚಾರಿ ಪ್ರಶಿಕ್ಷಣ ಕೇಂದ್ರ'ದಲ್ಲಿ ಆಚಾರ್ಯರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

**ಸೂ**ಫೀ ಪಂಥವು ಅನೇಕ ಸಂತರನ್ನು ಸೃಷ್ಟಿಸಿದೆ. ಅದರಲ್ಲೂ ರಬಿಯಾ ಎನ್ನುವ ಮಹಿಳೆಯು ಆ ಸಂತರ ಮಧ್ಯೆ ರತ್ನದಂತೆ ಕಂಗೊಳಿಸುತ್ತಿದ್ದಾಳೆ ಎನ್ನಬಹುದು. ಅವಳು ಅತ್ಯಂತ ಸರಳ ಜೀವನವನ್ನು ನಡೆಸಿದಳು. ಭಗವಂತನಲ್ಲಿ ಉತ್ಕಟ ಭಕ್ತಿಯನ್ನು ಹೊಂದಿದ್ದಳು. ಭಗವದ್ದರ್ಶನಕ್ಕಾಗಿ ಎಣೆಯಿಲ್ಲದ ವ್ಯಾಕುಲತೆಯನ್ನು ಬೆಳೆಸಿಕೊಂಡಿದ್ದಳು. ತೀವ್ರವಾದ ಮತ್ತು ಪ್ರಾಮಾಣಿಕವಾದ ಶ್ರದ್ಧೆಯು ಅವಳ ಜೀವನದ ಜೀವಸತ್ವವಾಗಿತ್ತು. ಕಡುಕಷ್ಟದ ಮಧ್ಯೆ ಬಾಳಿದರೂ, ಅವಳು ಭಗವದನುಗ್ರಹ ಮತ್ತು ಭಗವದಾನಂದಗಳ ಮೂರ್ತರೂಪವಾಗಿದ್ದಳು.

ಅವಳು ಹುಟ್ಟಿ ಬೆಳೆದದ್ದು ಈಜಿಪ್ಟ್ ದೇಶದಲ್ಲಿ. ಅವಳು ಸೂಫೀ ಉಪದೇಶಗಳನ್ನು ಸರಳ ಸುಂದರ ಭಾಷೆಯಲ್ಲಿ ಉಪದೇಶಿಸಿದಳು. ಅವುಗಳನ್ನು ಎಷ್ಟು ಮನೋಜ್ಞವಾಗಿ ಅವಳು ತಿಳಿಯಹೇಳಿದಳೆಂದರೆ, ಬಹಳ ಬೇಗನೆ ಅವಳ ಉಕ್ತಿಗಳು ಈಜಿಪ್ಟಿನಾದ್ಯಂತ ಪ್ರಸಿದ್ಧಿ ಹೊಂದಿದವು. ಸೂಫೀ ಪಂಥದ ಮೂಲತತ್ತ್ವಗಳು ಅವಳ ಸುಮನೋಹರ ಮಾತುಗಳ ಮೂಲಕ ಚೈತನ್ಯವನ್ನು ಪಡೆದುಕೊಂಡವು; ಸೂಫೀ ತತ್ತ್ವವು ತನ್ನದೇ ಆದ ವಿಶಿಷ್ಟತೆಯನ್ನು ಗಳಿಸಿಕೊಂಡಿತು. ರಬಿಯಾಳ ಹೃದಯದಲ್ಲಿ ಜ್ವಲಿಸುತ್ತಿದ್ದ ಆಧ್ಯಾತ್ಮಿಕ ವ್ಯಾಕುಲತೆಯು ಅವಳ ಮಾತುಗಳಿಗೆ ಅಪಾರ ಶಕ್ತಿಯನ್ನು ತಂದುಕೊಟ್ಟಿದೆ; ಆ ನುಡಿಗಳನ್ನು ಚಿರಂತನ ಕಾವ್ಯವನ್ನಾಗಿಸಿದೆ.

ರಬಿಯಾ ಹುಟ್ಟಿದ್ದು ಈಜಿಪ್ಟ್ ದೇಶದ ಬಸರಾ ಎಂಬ ಊರಿನಲ್ಲಿ. ಅವಳು ಒಂದು ಬಡ ಕುಟುಂಬದ ನಾಲ್ಕನೆಯ ಮಗಳು. ಆ ಕಾಲದಲ್ಲಿ ಈಜಿಪ್ಟ್ ದೇಶವು ಭಯಂಕರ ಬರದಿಂದ ಬಳಲುತ್ತಿತ್ತು. ಕಡುಬಡವನಾಗಿದ್ದ ರಬಿಯಾಳ ತಂದೆಯು ಅವಳನ್ನು ಶ್ರೀಮಂತನೊಬ್ಬನಿಗೆ ದಾಸಿಯಾಗಿ ಮಾರಿಬಿಟ್ಟನು. ಆ ಧನಿಕನು ಕ್ರೂರಿಯಾಗಿದ್ದನು, ವಿಪರೀತ ಕೆಲಸ ಮಾಡಿಸುತ್ತಿದ್ದನು. ರಬಿಯಾ ಬೆಳಗ್ಗೆಯಿಂದ ರಾತ್ರಿಯವರೆಗೆ ಬಹಳ ಪರಿಶ್ರಮಪಟ್ಟು ಎಲ್ಲ ರೀತಿಯ ಕೆಲಸಗಳನ್ನೂ ಮಾಡುತ್ತಿದ್ದಳು. ಹೀಗಿದ್ದರೂ, ಅವಳ ಒಡೆಯ ಅವಳನ್ನು ವಿಪರೀತ ಬೈಯುತ್ತಿದ್ದನು; ಆಗಾಗ ಹೊಡೆಯುತ್ತಿದ್ದನು. ಅವನು ಎಷ್ಟು ನಿರ್ದಯವಾಗಿ ಅವಳನ್ನು ನಡೆಸಿಕೊಳ್ಳುತ್ತಿದ್ದನೆಂದರೆ, 'ಇಲ್ಲಿಂದ ಓಡಿಹೋಗೋಣ' ಎಂದು ಅವಳು ಬಹಳ ಸಲ ಅಂದುಕೊಳ್ಳುತ್ತಿದ್ದಳು.

ಒಂದು ದಿನ ರಾತ್ರಿಯ ಹೊತ್ತು. ಎಲ್ಲರೂ ಮಲಗಿಕೊಂಡಿದ್ದಾರೆ. ರಸ್ತೆಗಳು ನಿರ್ಜನವಾಗಿವೆ. ರಬಿಯಾ ತನ್ನ ಧಣಿಯ ಮನೆಯಿಂದ ಹೊರಬಂದಳು. ತನ್ನ ಬವಣೆಯಿಂದ ತಪ್ಪಿಸಿಕೊಳ್ಳಲು ರಸ್ತೆಗುಂಟ ನಡೆಯತೊಡಗಿದಳು. ದುರದೃಷ್ಟಕ್ಕೆ ಕಾಲು ಎಡವಿ ಬಿದ್ದು, ಕೈ ಮುರಿದುಕೊಂಡಳು. ಅಸಾಧ್ಯವಾದ ನೋವಿನಿಂದ ನರಳುತ್ತಿದ್ದ ಈ ಸಮಯದಲ್ಲಿ ತುಂಬು ಹತಾಶೆ ಮತ್ತು ಸಂಕಟದಿಂದ ದೇವರಿಗೆ ಹೀಗೆ ಪ್ರಾರ್ಥನೆ ಮಾಡಿದಳು: ''ಓ ಪ್ರಭು, ನಾನೊಬ್ಬ ದುಃಖಿ, ಅನಾಥೆ. ದರಿದ್ರ ಗುಲಾಮ ಹುಡುಗಿ. ಇದಲ್ಲದೆ ಈಗ ನನ್ನ ಕೈಯನ್ನು ಬೇರೆ ಮುರಿದುಕೊಂಡಿದ್ದೇನೆ. ಆದರೂ ನನ್ನ ಈ ದುರದೃಷ್ಟ ಅವಸ್ಥೆಗಾಗಿ ನಿನ್ನನ್ನು ನಾನು ದೂರುವುದಿಲ್ಲ. ನೀನು ದೊಡ್ಡವನು, ಸರ್ವಜ್ಞ. ನಾನು ನಿನ್ನನ್ನು ಕೇಳಿಕೊಳ್ಳುವುದಿಷ್ಟೇ – ನಿನ್ನನ್ನು ನಾನು ಎಂದಿಗೂ ಮರೆಯದಂತೆ ಮಾಡು. ಯಾವತ್ತೂ ನನಗೆ ನಿನ್ನ ಸಾನ್ನಿಧ್ಯ ದೊರಕಲಿ. ದಯವಿಟ್ಟು ನನ್ನ ಬಗ್ಗೆ ನೀನು ಪ್ರೀತನಾಗಿರು.''

ಆಗ ಅವಳು ಒಂದು ವಾಣಿಯನ್ನು ಆಲಿಸಿದಳು : ''ಮಗೂ, ಸಹನೆಯಿಂದ ಇರು. ಸ್ವಲ್ಪ ಸಮಯದಲ್ಲಿಯೇ ದೇವರು ನಿನ್ನನ್ನು ಒಬ್ಬ ದೊಡ್ಡ ವ್ಯಕ್ತಿಯನ್ನಾಗಿ ಮಾಡುತ್ತಾನೆ. ದೇವರ ಹೆಸರಿನಲ್ಲಿ ನಿನಗೆ ಕೀರ್ತಿಯೂ ಲಭಿಸುತ್ತದೆ. ನೀನು ಎಷ್ಟು ಪ್ರಸಿದ್ಧಳಾಗುತ್ತೀ ಎಂದರೆ, ಭಗವಂತನ ದೇವದೂತರು ನಿನ್ನನ್ನು ಕೊಂಡಾಡುತ್ತಾರೆ. ಇದಲ್ಲದೆ ನೀನು ನಿನ್ನ ಜೀವನದ ಉದ್ದೇಶವನ್ನು ತಲುಪುತ್ತೀಯೆ; ಭಗವಂತನನ್ನು ಕಾಣುತ್ತೀಯೆ.''

ಇದನ್ನು ಕೇಳಿ ರಬಿಯಾಗೆ ಬಹಳ ಆನಂದವಾಯಿತು. ಉಲ್ಲಾಸ ಮನಸ್ಸಿನಲ್ಲೆಲ್ಲ ತುಂಬಿತು. ತುಂಬು ಶ್ರದ್ಧೆ ಮತ್ತು ಆತ್ಮವಿಶ್ವಾಸಗಳಿಂದ ಅವಳು ಮೇಲಕ್ಕೆದ್ದಳು; ತನ್ನ ಧಣಿಯ ಮನೆಗೆ ವಾಪಸ್ಸು ಬಂದಳು.

ರಬಿಯಾಗೆ ಕೊರಾನ್ ಓದುವುದು ಎಂದರೆ ಬಹಳ ಇಷ್ಟ. ದಿವಸವಿಡೀ ಕೆಲಸ ಮಾಡಿ, ರಾತ್ರಿ ಹೊತ್ತು ಎಲ್ಲರೂ ಮಲಗಿ ನಿದ್ರಿಸುತ್ತಿದ್ದಾಗ ಕೊರಾನ್ ಅಧ್ಯಯನ ಮತ್ತು ಪ್ರಾರ್ಥನೆಗಳಲ್ಲಿ ಕಾಲ ಕಳೆಯುತ್ತಿದ್ದಳು. ಒಮ್ಮೆ ಅವಳ ಯಜಮಾನ ನಿದ್ರೆ ಮಾಡುತ್ತಿದ್ದವನು, ಹಠಾತ್ತನೆ ಎದ್ದುಕುಳಿತ. ರಬಿಯಾಳ ಕೋಣೆಯಿಂದ ಮಾತುಕತೆಯ ಶಬ್ದ ಬರುತ್ತಿರುವುದನ್ನು ಕೇಳಿ, ಕುತೂಹಲದಿಂದ ಹತ್ತಿರ ಹೋಗಿ, ರಹಸ್ಯವಾಗಿ ಕೇಳಿಸಿಕೊಂಡ. ರಬಿಯಾ ದೇವರನ್ನು ಕುರಿತು ಹೃದಯಪೂರ್ವಕವಾಗಿ ಹೀಗೆ ಪ್ರಾರ್ಥಿಸುತ್ತಿದ್ದಳು:

''ಓ ದೇವರೇ, ನೀನು ಎಲ್ಲವನ್ನೂ ತಿಳಿದವನು. ನಿನ್ನ ಎಲ್ಲ ಆದೇಶಗಳನ್ನೂ ನಾನು ಪರಿಪಾಲಿಸುತ್ತಿರುವೆ ಎಂದು ನಿನಗೆ ತಿಳಿದೇ ಇದೆ. ನಿನ್ನ ಇಚ್ಛೆಯನ್ನು ಚಾಚೂ ತಪ್ಪದೆ ನಡೆಸಲು ನಾನು ಪ್ರಯತ್ನಿಸುತ್ತಿರುವೆ ಎನ್ನುವುದು ನಿನಗೆ ಗೊತ್ತೇ ಇದೆ. ಅದಕ್ಕಾಗಿ, ಹೇ ಪ್ರಭೂ, ನಿನ್ನನ್ನೇ ನಾನು ಸಂಪೂರ್ಣವಾಗಿ ಅವಲಂಬಿಸಿದ್ದೇನೆ, ನಿನ್ನನ್ನೇ ನಂಬಿದ್ದೇನೆ. ನನ್ನ ಒಂದೇ ಆಸೆಯೆಂದರೆ, ನನ್ನ ಜೀವನ ಪೂರ್ತಿ ನಾನು ಹೀಗೆಯೇ ನಡೆದುಕೊಳ್ಳಬೇಕು ಎಂದು. ನನ್ನ ಆಕಾಂಕ್ಷೆ ಇಷ್ಟೇ – ದಿನವಿಡೀ, ರಾತ್ರಿಯಿಡೀ ನಾನು ನಿನ್ನ ಸೇವೆಯಲ್ಲಿಯೇ ಕಳೆಯಬೇಕು, ನಿನ್ನ ಪ್ರಾರ್ಥನೆಯಲ್ಲಿಯೇ ಸವೆಸಬೇಕು. ದಯವಿಟ್ಟು ಇದನ್ನು ನಡೆಸಿಕೊಡು. ಈಗ ನನ್ನ ಪರಿಸ್ಥಿತಿ ನೋಡು. ನಾನೊಬ್ಬ ಅಸಹಾಯಕ ಗುಲಾಮ ಹುಡುಗಿ. ಹೀಗಾಗಿ ನಿನ್ನ ಧ್ಯಾನದಲ್ಲಿ ಹೆಚ್ಚು ಸಮಯವನ್ನು ಕಳೆಯುವುದಕ್ಕೆ ಸಾಧ್ಯವಾಗುತ್ತಿಲ್ಲ. ಇದರಿಂದ ನಿನ್ನನ್ನು ನಾನು ಕಡೆಗಣಿಸುತ್ತಿದ್ದೇನೆ ಎಂದು ನನಗೆ ದುಃಖವಾಗುತ್ತಿದೆ. ಏಕೆಂದರೆ ನನ್ನ ಪಾಲಿಗೆ ಇದೊಂದು ಪವಿತ್ರ ಕರ್ತವ್ಯ. ಇದಕ್ಕಾಗಿ ದಯವಿಟ್ಟು ನನ್ನನ್ನು ಕ್ಷಮಿಸಿಬಿಡು.''

ಯಜಮಾನನು ರಬಿಯಾಳ ಪ್ರಾರ್ಥನೆಯನ್ನು ಗಮನವಿಟ್ಟು ಕೇಳಿಸಿಕೊಳ್ಳುತ್ತಿದ್ದನು. ಕೇಳುತ್ತ ಕೇಳುತ್ತ ರಬಿಯಾಳ ಬಗ್ಗೆ ಅವನಿಗೆ ಗೌರವ ಹೆಚ್ಚಾಗುತ್ತ ಹೋಯಿತು. ಆ ಹೊತ್ತಿನಲ್ಲಿ ಮಂಡಿಯೂರಿ ಪ್ರಾರ್ಥಿಸುತ್ತಿದ್ದ ಅವಳ ತಲೆಯ ಸುತ್ತಲೂ ದಿವ್ಯಬೆಳಕಿನ ಪ್ರಭಾವಳಿಯನ್ನು ನೋಡಿ ಅವನು ದಂಗಾಗಿಹೋದನು. ತನ್ನಲ್ಲೇ ಹೀಗೆ ಯೋಚಿಸಿಕೊಂಡನು: ''ಇನ್ನು ಮುಂದೆ ಇವಳಿಂದ ಇಷ್ಟೊಂದು ಕೆಲಸ ಮಾಡಿಸುವುದು ಒಳ್ಳೆಯದಲ್ಲ. ಇದಕ್ಕೆ ಬದಲಾಗಿ ಇನ್ನು ಮುಂದೆ ನಾನೇ ಇವಳ ಸೇವೆಯನ್ನು ಮಾಡಬೇಕು. ಅದೇ ಸರಿಯಾದುದು.'' ಮರುದಿನವೇ ಅವನು ರಬಿಯಾಳನ್ನು ಗುಲಾಮಗಿರಿಯಿಂದ ಬಿಡಿಸಿದನು. ''ರಬಿಯಾ, ನಿನ್ನ ಮೇಲೆ ನನಗೆ ಎಣೆಯಿಲ್ಲದ ಗೌರವ ಮೂಡಿದೆ. ನೀನು ನನ್ನ ಮನೆಯಲ್ಲಿಯೇ ಇನ್ನು ಮುಂದೆಯೂ ಇರುವುದಾದರೆ, ಬಹಳ ಸಂತೋಷ. ನಾನೇ ನಿನ್ನ ಎಲ್ಲ ಸೌಕರ್ಯವನ್ನೂ ನೋಡಿಕೊಳ್ಳುತ್ತೇನೆ. ಬೇರೆ ಕಡೆ ಹೋಗಿ ನೀನು ನೆಲೆಸಲು ಇಚ್ಛಿಸುವೆಯಾದರೆ, ನಿನಗೆ ಪೂರ್ಣ ಸ್ವಾತಂತ್ರ್ಯವಿದೆ'' ಎಂದು ಹೇಳಿದನು.

ಕೃತಜ್ಞತಾಭಾವದಿಂದ ತುಂಬಿಹೋದಳು ರಬಿಯಾ. ಆತನ ಮನೆಯಲ್ಲಿ ತಾನು ಇರುವ ಅವಧಿ ಮುಗಿದಿದೆ ಎಂದು ತನ್ನ ಯಜಮಾನನಿಗೆ ಮನಗಾಣಿಸಿದಳು. ಭಗವಂತನೆಡೆಗೆ ತನ್ನನ್ನು ಸಂಪೂರ್ಣ ಸಮರ್ಪಿಸಿಕೊಂಡು, ಬೇರೆ ವಾಸ್ತವ್ಯವನ್ನು ಹೂಡುವ ಇಚ್ಛೆಯನ್ನು ವ್ಯಕ್ತಪಡಿಸಿದಳು. ಹಾಗೆಯೇ ಆಗಲೆಂದು ಧಣಿಯು ರಬಿಯಾಳನ್ನು ಮುಕ್ತಗೊಳಿಸಿದನು.

ಅಂದಿನಿಂದ ರಬಿಯಾ ಭಗವದರ್ಪಿತವಾದ ಜೀವನವನ್ನು ನಡೆಸಲು ಆರಂಭಿಸಿದಳು. ದೇವರಲ್ಲಿ ಸಂಪೂರ್ಣ ಶರಣಾಗಿ ಕಠಿಣ ವ್ರತಗಳನ್ನು ಕೈಗೊಳ್ಳಲು ಆರಂಭಿಸಿದಳು. ಪರಿಪೂರ್ಣ ಭಕ್ತಿ ಮತ್ತು ತ್ಯಾಗಗಳೆಂಬ ಮೇರು ಆದರ್ಶಗಳ ಅಪೂರ್ವ ಸಂಗಮವಾಯಿತು ಅವಳ ಬಾಳು. ಪರಿಶುದ್ಧ ಮನಸ್ಸಿನ ಅವಳು ದೇವರ ಮಗಳಾಗಿ ಬಾಳಿದಳು.

ಇನ್ನು ಮುಂದೆ ರಬಿಯಾಳ ಜೀವನದ ಎರಡನೆಯ ಘಟ್ಟವನ್ನು ಕಾಣುತ್ತೇವೆ. ಸಾಧಕಿಯಾಗಿ ಸುಸಂಪನ್ನತೆಯನ್ನು ಪಡೆದುಕೊಂಡ ರಬಿಯಾ ಉಪದೇಶಕಿಯಾದಳು. ಇವಳ ಚೈತನ್ಯಪೂರ್ಣ ನುಡಿಗಳನ್ನು ಕೇಳಲು ಜನರು ದೂರದೂರದಿಂದ ಬರುತ್ತಿದ್ದರು. ಅವಳ ಒಂದು ಮಾತನ್ನು ಆಲಿಸಲು, ಅವಳ ದಿವ್ಯ ವದನದ ದರ್ಶನವನ್ನು ಪಡೆಯಲು ಹಾತೊರೆಯುತ್ತಿದ್ದರು. ಅಂದಿನ ಕಾಲದ ದೊಡ್ಡ ತಪಸ್ವಿಯಾದ ಹೊಸಾಯಿನ್ ಬಸಾರೈ ಎನ್ನುವ ಮಹಾತ್ಮನು ಆಕೆಯ ಬಗ್ಗೆ ಹೀಗೆ ಹೇಳುತ್ತಿದ್ದನು: ''ಅವಳೊಬ್ಬ ವಿರಳ ಮತ್ತು ಮಹಾನ್

ಆತ್ಮ. ತನ್ನ ಸಾಕ್ಷಾತ್ಕಾರವನ್ನು ಮತ್ತು ಜ್ಞಾನವನ್ನು ಅವಳು ಭಗವಂತನಿಂದಲೇ ನೇರವಾಗಿ ಗಳಿಸಿಕೊಂಡಿದ್ದಾಳೆ. ಯಾವುದೇ ಮನುಷ್ಯ ಗುರುವಿನ ಅಥವಾ ಮಾರ್ಗದರ್ಶಕನ ಆವಶ್ಯಕತೆ ಅವಳಿಗೆ ಬೇಕಾಗಿಯೇ ಇರಲಿಲ್ಲ.''

ಒಮ್ಮೆ ಒಬ್ಬರು ನೀನೇಕೆ ಮದುವೆಯಾಗಲಿಲ್ಲವೆಂದು ರಬಿಯಾಳನ್ನು ಕೇಳಿದರು. ಅದಕ್ಕೆ ಅವಳು ಕೊಟ್ಟ ಉತ್ತರ ಮಾರ್ಮಿಕವಾಗಿತ್ತು: ''ದೇಹವಿಲ್ಲದೆ ವಿವಾಹ ಜರುಗಲಾರದು, ಅಲ್ಲವೆ? ನನ್ನದು ಎನ್ನುವ ದೇಹವೇ ಈಗ ನನಗಿಲ್ಲ. ಅದು ಎಂದೋ ಭಗವಂತನಿಗೆ ಅರ್ಪಿತವಾಗಿಬಿಟ್ಟಿದೆ.'' ಒಮ್ಮೆ ಹೊಸಾಯಿನ್ ಬಸಾರೈ ಅವಳನ್ನು ಕೇಳಿದ, ''ರಬಿಯಾ, ನೀನು ಇಷ್ಟೊಂದು ಉನ್ನತ ಹಂತವನ್ನು ತಲುಪಿದ್ದು ಹೇಗೆ?'' ಎಂದು. ಅದಕ್ಕೆ ಅವಳು, ''ನನ್ನ ಸ್ವಂತದ್ದನ್ನೆಲ್ಲ ಭಗವಂತನಿಗೆ ಸಮರ್ಪಿಸುವುದರ ಮೂಲಕ'' ಎಂದು ಉತ್ತರಿಸಿದಳು. ಭಗವಂತನೆಂದರೆ ಯಾರು ಎಂಬ ಒಂದು ಪ್ರಶ್ನೆಗೆ ಅವಳು ಉತ್ತರಿಸಿದ್ದು ಹೀಗೆ: ''ದೇವರು ಹೀಗೆಯೇ ಇದ್ದಾನೆ, ಹಾಗೆ ಇದ್ದಾನೆ ಎಂದು ನಾನು ಹೇಳಲಾರೆ. ಆದರೆ ಇಷ್ಟು ಮಾತ್ರ ನನಗೆ ಗೊತ್ತು. ಅವನದು ನಿರಾಕಾರ ಸ್ವರೂಪ; ಅವನು ಅನಂತ ತತ್ತ್ವ. ಅವನು ಎಲ್ಲಕ್ಕಿಂತಲೂ ಬಹು ಹತ್ತಿರದವನು ಎಂದು ನಾನು ಸದಾ ಭಾವಿಸುತ್ತೇನೆ.''

ತನ್ನ ಎಲ್ಲ ಉಕ್ತಿಗಳಲ್ಲಿಯೂ ರಬಿಯಾ ದೇವರ ಬಗ್ಗೆ ತನ್ನ ಉತ್ಕಟ ವ್ಯಾಕುಲತೆಯನ್ನು ಮತ್ತು ದಿವ್ಯಪ್ರೇಮವನ್ನು ವ್ಯಕ್ತಪಡಿಸದೆ ಇರುತ್ತಿರಲಿಲ್ಲ. ಅವಳ ಭಾವನೆಗಳು ನಮ್ಮನ್ನು ಮತೀಯ ಗೋಡೆಗಳ ನಡುವಣ ಬಂಧನದಿಂದ ಸತ್ಯ ಮತ್ತು ತತ್ತ್ವಗಳ ಉನ್ನತ ಆಧ್ಯಾತ್ಮಿಕ ಸೌಧಗಳಿಗೆ ಕರೆದುಕೊಂಡುಹೋಗುತ್ತವೆ; ಜಗತ್ತಿನ ಸೀಮಿತತೆಯಿಂದ ದೂರ ಕರೆದೊಯ್ದು ಸೀಮಾತೀತ ಭಗವಂತನ ದರ್ಶನವನ್ನು ಮಾಡಿಸುತ್ತವೆ.

ಅತ್ಯಂತ ಸಂಕಷ್ಟಮಯ ಪರಿಸ್ಥಿತಿಗಳಲ್ಲಿಯೂ ಶಾಂತವಾಗಿ ದೇವರನ್ನು ಪ್ರಾರ್ಥಿಸುವ ಅದ್ಭುತ ಸಂಯಮವನ್ನು ರಬಿಯಾ ಬೆಳೆಸಿಕೊಂಡಿದ್ದಳು. ಪ್ರಾರ್ಥನೆಯ ಉದ್ದೇಶ ಸ್ವರ್ಗಕ್ಕೆ ಹೋಗುವುದೂ ಅಲ್ಲ, ನರಕವನ್ನು ತಪ್ಪಿಸಿಕೊಳ್ಳುವುದೂ ಅಲ್ಲ ಎಂದು ಅವಳು ಅಭಿಪ್ರಾಯಪಡುತ್ತಾಳೆ. ''ಕೆಳಮಟ್ಟದ ಭಕ್ತರು ಮಾತ್ರವೇ ಅಂಥ ಉದ್ದೇಶಗಳನ್ನು ಹೊಂದಿರುತ್ತಾರೆ. ಸ್ವರ್ಗ-ನರಕಗಳೇ ಇಲ್ಲವಾದರೆ, ದೇವರ ಪ್ರಾರ್ಥನೆಯನ್ನೂ ಬಿಡಲು ಸಾಧ್ಯವೆ? ಭಗವಂತನ ನಿಜವಾದ ಭಕ್ತರು ಯಾವುದೇ ಸ್ವಾರ್ಥ ಬಯಕೆಯನ್ನು ಪೂರೈಸಿಕೊಳ್ಳಲು ಪ್ರಾರ್ಥಿಸುವುದಿಲ್ಲ, ಅವರು ಪ್ರಾರ್ಥಿಸುವುದು ದೇವರ ಸಾನ್ನಿಧ್ಯಕ್ಕಾಗಿ. ಅವರು ಸ್ವರ್ಗವನ್ನಾಗಲಿ ಅಥವಾ ಇನ್ನಾವುದೇ ವರವನ್ನಾಗಲಿ ದೇವರಿಂದ ಬಯಸುವುದಿಲ್ಲ.''

ಸೈತಾನನ ಬಗ್ಗೆ ರಬಿಯಾಳ ನಿಲುವು ಹೀಗಿತ್ತು: ''ನಾನು ಸದಾಕಾಲ ಭಗವಂತನ ಸಾನ್ನಿಧ್ಯದಲ್ಲಿ ಎಷ್ಟು ತನ್ಮಯಳಾಗಿರುತ್ತೇನೆ ಎಂದರೆ, ಸೈತಾನ ಎಂಬುವವನು ಇದ್ದಾನೆ ಎನ್ನುವ ಪರಿವೆಯೂ ನನಗೆ ಇರುವುದಿಲ್ಲ.'' 'ನೀನು ಇಷ್ಟೊಂದು ಪ್ರಾರ್ಥನೆ ಮಾಡುತ್ತೀಯೆ. ನೀನು ನಿಜವಾಗಿಯೂ ಭಗವಂತನನ್ನು ನೋಡಿದ್ದೀಯಾ?' ಎಂದು ಒಬ್ಬರು ಪ್ರಶ್ನಿಸಿದಾಗ, ರಬಿಯಾ ಹೀಗೆ ಹೇಳುತ್ತಾಳೆ: ''ಮೊದಲು ನಾನು ಭಗವಂತನ ದರ್ಶನ ಪಡೆಯುತ್ತೇನೆ, ನಂತರವೇ ಅವನನ್ನು ಪ್ರಾರ್ಥಿಸುತ್ತೇನೆ. ಅವನ ಸನಿಹವನ್ನು ಭಾವಿಸದೆ, ಪ್ರಾರ್ಥಿಸುವುದಾದರೂ ಹೇಗೆ ಸಾಧ್ಯ?''

ಒಮ್ಮೆ ಮಹಾತ್ಮನಾದ ಹೊಸಾಯಿನ್ ಬಸಾರೈ ಹೀಗೆ ಘೋಷಿಸಿದ: ''ಪರಲೋಕದಲ್ಲಿ ದೇವರ ಸಾನ್ನಿಧ್ಯ ನನಗೆ ದೊರಕದೆ ಇದ್ದರೆ, ನಾನು ಕೂಗಿ ಅಳುತ್ತೇನೆ. ಆಗ ದೇವರೇ ತಾಳಲಾಗದೆ ಬಂದು ನನ್ನನ್ನು ಸಂತೈಸಬೇಕಾಗುತ್ತದೆ.'' ಅದಕ್ಕೆ ರಬಿಯಾ ಹೀಗೆಂದಳು: ''ಅಂಥ ಪರಿಸ್ಥಿತಿ ಪರಲೋಕದಲ್ಲಿ ಉಂಟಾಗಬೇಕಾದರೆ, ಮೊದಲು ಅದನ್ನು ಇಹಲೋಕದಲ್ಲಿ ಅಭ್ಯಾಸ ಮಾಡಬೇಕು. ಒಂದು ಕ್ಷಣವಾದರೂ ಭಗವಂತನ ವಿಯೋಗವಾದರೆ, ಕೂಗುತ್ತ ಅಳುವ ಮನಸ್ಥಿತಿ ಗಳಿಸಿಕೊಳ್ಳಬೇಕು.''

ಒಮ್ಮೆ ಒಬ್ಬ ಶ್ರೀಮಂತ ಬೆಳ್ಳಿ ನಾಣ್ಯಗಳು ತುಂಬಿದ್ದ ಸಣ್ಣಚೀಲವನ್ನು ರಬಿಯಾಗೆ ಸಮರ್ಪಿಸಿದ. ಹೊಸಾಯಿನ್ ಬಸಾರೈ ಅದನ್ನು ಸ್ವೀಕರಿಸುವಂತೆ ಕೇಳಿಕೊಂಡ. ಆಗ ರಬಿಯಾ ಹೀಗೆ ಹೇಳಿದಳು: ''ಭಗವಂತನು ಕರುಣಾಳು. ಅವನು ದುಷ್ಟರನ್ನೂ ಶಿಷ್ಟರನ್ನೂ ಸಮಾನವಾಗಿ ಕಾಪಾಡುತ್ತಾನೆ. ನಾನಾದರೋ ಅವನನ್ನು ಪ್ರತಿನಿಮಿಷವೂ ಚಿಂತಿಸುತ್ತಲೇ ಇರುತ್ತೇನೆ. ಹಾಗಿರುವಾಗಿ ನನ್ನನ್ನು ಅವನು ಹೇಗೆ ತಾನೇ ಮರೆತುಬಿಟ್ಟಾನು? ನನಗೆ ಭಗವಂತನ ಮಹಾನತೆಯ ಅರಿವು ಚೆನ್ನಾಗಿ ಆಗಿದೆ. ಹೀಗಾಗಿ ಈ ಜಗತ್ತಿಗೆ ಸಂಬಂಧಪಟ್ಟ ಯಾವುದೇ ವಸ್ತುವಿಗೂ ನಾನು ಗಮನ ಕೊಡುವುದಿಲ್ಲ ಎಂದು ಅವನಿಗೆ ಹೇಳು. ಇದಲ್ಲದೆ ಇಷ್ಟೊಂದು ಹಣವನ್ನು ಆ ಶ್ರೀಮಂತ ಹೇಗೆ ಗಳಿಸಿದ ಎಂದೂ ನನಗೆ ತಿಳಿಯದು. ಆ ಕಾರಣದಿಂದಲೂ ನಾನು ಈ ಹಣವನ್ನು ಸ್ವೀಕರಿಸಲಾರೆ.''

ಒಮ್ಮೆ ರಬಿಯಾ ಕಾಯಿಲೆಗೆ ತುತ್ತಾದಳು. ಆಗಿನ ಕಾಲದ ಮಹಾನ್ ಸಂತರಾದ ಅಬ್ದುಲ್ ಒಮಾರ್ ಮತ್ತು ಸುಫಿಯನ್ ಅವಳನ್ನು ನೋಡಲು ಹೋದರು. ಅವಳ ಬಳಿ ಮೌನವಾಗಿ ನಿಂತಿದ್ದರು. ರಬಿಯಾಳೇ ಅವರ ಬಳಿಗೆ ತಿರುಗಿ ಮಾತನಾಡಿದಳು: ''ಸುಫಿಯನ್, ನೀನು ಹೇಳಬೇಕೆಂದಿರುವುದನ್ನು ದಯವಿಟ್ಟು ಹೇಳು.'' ಅದಕ್ಕೆ ಸುಫಿಯನ್ ಹೇಳುತ್ತಾನೆ: ''ಓ ಪೂಜ್ಯಳೇ, ನಿನ್ನ ಕಾಯಿಲೆಯನ್ನು ಗುಣಪಡಿಸಲು ದೇವರಿಗೆ ಕೇಳಿಕೋ.'' ಅದಕ್ಕೆ ಮುಗುಳ್ನಗುತ್ತ ರಬಿಯಾ ಹೀಗೆ ಹೇಳುತ್ತಾಳೆ: ''ಸುಫಿಯನ್, ನೀನೊಬ್ಬ ದೊಡ್ಡ ಸಂತ. ಹೀಗಿದ್ದರೂ ಇಂಥ ತುಚ್ಛ ಸಲಹೆಯನ್ನು ನನಗೆ ನೀಡುತ್ತಿದ್ದೀಯಲ್ಲ! ಈ ಕಾಯಿಲೆಯನ್ನು ಕೊಟ್ಟವನು ಯಾರು ಎಂದು ನಿನಗೆ ಗೊತ್ತಿಲ್ಲವೇನು?'' ಸುಫಿಯನ್ ಕೊಂಚ ಹೊತ್ತು ಯೋಚಿಸಿ ಹೇಳಿದ: ''ತಾಯೆ, ನೀನು ಹೇಳಿದ್ದು ಸರಿ. ಇದೂ ಭಗವಂತನ ಇಚ್ಛೆಯೇ ಸರಿ.'' ಸ್ವಲ್ಪಕಾಲದ ನಂತರ ಅವನು ಮತ್ತೆ ಕೇಳಿದ, ''ನಿನಗೆ ಏನಾದರೂ ತಿನ್ನಲು ಇಚ್ಛೆಯೆ?'' ಅದಕ್ಕೆ ರಬಿಯಾ ಅಚ್ಚರಿಯ ಉತ್ತರ ನೀಡುತ್ತಾಳೆ: ''ಸುಫಿಯನ್, ನನಗೆ ಬಾಲ್ಯದಿಂದಲೂ ಖರ್ಜೂರದ ಹಣ್ಣು ಎಂದರೆ ಬಹಳ ಇಷ್ಟ. ಇದಲ್ಲದೆ ಈ ಪ್ರದೇಶದಲ್ಲಿ ಅದು ಯಥೇಚ್ಛವಾಗಿ ಸಿಕ್ಕುತ್ತದೆ, ಕೂಡ. ಆದರೂ ಕಳೆದ ಇಪ್ಪತ್ತು ವರ್ಷಗಳಿಂದ ನಾನು ಒಂದು ಖರ್ಜೂರವನ್ನೂ

ತಿಂದೇ ಇಲ್ಲ. ಇದೂ ಕೂಡ ಭಗವಂತನ ಇಚ್ಛೆಯಲ್ಲವೆ?'' ಈ ಉತ್ತರ ಸುಫಿಯನ್‌ನ ಹೃದಯವನ್ನು ತಟ್ಟಿತು. ರಬಿಯಾಳ ಅಪೂರ್ವ ತ್ಯಾಗವನ್ನು ಕಂಡು ಅವನು ಮುಗ್ಧನಾದ.

ರಬಿಯಾಳ ಭಗವಂತನ ಮೇಲಿನ ವಿಶ್ವಾಸ ಎಣೆಯಿಲ್ಲದ್ದು. ಒಮ್ಮೆ ರಬಿಯಾಳ ಹತ್ತಿರ ಎರಡು ರೊಟ್ಟಿಗಳು ಮಾತ್ರವೇ ಉಳಿದಿದ್ದವು. ಬಹಳ ಹಸಿವೆಯಿಂದ ಕಂಗಾಲಾಗಿದ್ದ ಇಬ್ಬರು ಫಕೀರರು ಆಹಾರ ಕೇಳಿ ಬಂದರು. ಅಷ್ಟರಲ್ಲಿ ಅಷ್ಟೊಂದು ಹಸಿವೆ ಇರದಿದ್ದ ಮೂರನೆಯ ಫಕೀರ ಕೂಡ ಬಂದ. ರಬಿಯಾ ಈ ಮೂರನೆಯ ಫಕೀರನಿಗೆ ತನ್ನಲ್ಲಿದ್ದ ಎರಡು ರೊಟ್ಟಿಗಳನ್ನೂ ಕೊಟ್ಟುಬಿಟ್ಟಳು. ಇದರಿಂದ ಎಲ್ಲರಿಗೂ ಆಶ್ಚರ್ಯವಾಯಿತು. ಸ್ವಲ್ಪಹೊತ್ತಿನಲ್ಲಿಯೇ ಒಬ್ಬ ಸೇವಕನು ಕೆಲವು ರೊಟ್ಟಿಗಳನ್ನು ನೀಡಿದ. ರಬಿಯಾ ಅವುಗಳನ್ನು ಎಣಿಸಿದಳು. ''ಏನೋ ವ್ಯತ್ಯಾಸವಾಗಿದೆ. ಇನ್ನೆರಡು ರೊಟ್ಟಿಗಳು ಬರ ಬೇಕಾಗಿದೆಯಲ್ಲ'' ಎಂದಳು. ಅಷ್ಟರಲ್ಲಿ ಇನ್ನೊಬ್ಬ ಸೇವಕ ಇನ್ನೆರಡು ರೊಟ್ಟಿಗಳನ್ನು ತಂದುಕೊಟ್ಟ. ''ಈಗ ಸರಿಯಾಗಿದೆ'' ಎಂದು ರಬಿಯಾ ನಿರಾಳವಾದಳು. ಹಸಿವೆಯಿಂದ ನರಳುತ್ತಿದ್ದ ಫಕೀರರು ರೊಟ್ಟಿಗಳನ್ನು ತಿಂದು ಸಂತೋಷಪಟ್ಟರು. ಇದೆಲ್ಲ ಏನು ಎಂದು ನೆರೆದಿದ್ದ ಜನ ಕೇಳಿದಾಗ ರಬಿಯಾ ಹೀಗೆ ವಿವರಣೆ ನೀಡಿದಳು: ''ಆ ಎರಡು ಫಕೀರರರಿಗೆ ನಾನು ರೊಟ್ಟಿಗಳನ್ನು ಏಕೆ ನೀಡಲಿಲ್ಲ, ಗೊತ್ತೆ? ನನ್ನಲ್ಲಿದ್ದ ಎರಡು ರೊಟ್ಟಿಗಳು ಅವರಿಗೆ ಸಾಕಾಗುತ್ತಿರಲಿಲ್ಲ. ಆ ಮೂರನೆಯ ಫಕೀರ ಬಂದನಲ್ಲ, ಅವನಿಗೆ ಅಷ್ಟು ಸಾಕಾಗುತ್ತಿತ್ತು. ಅದಕ್ಕೇ ಅವನಿಗೆ ಎರಡು ರೊಟ್ಟಿಗಳನ್ನು ಕೊಟ್ಟೆ. ಆಗ ನನಗೆ ಭಗವಂತನ ಆಶ್ವಾಸನೆ ನೆನಪಿಗೆ ಬಂತು. 'ರಬಿಯಾ, ನೀನು ಎಷ್ಟು ಕೊಡುತ್ತೀಯೋ, ಅದಕ್ಕೆ ಹತ್ತುಪಟ್ಟು ಸ್ವೀಕರಿಸುತ್ತೀಯೆ' ಎನ್ನುವುದೇ ಆ ಆಶ್ವಾಸನೆ. ಈ ಪ್ರಕಾರ ರೊಟ್ಟಿಗಳನ್ನು ಕಳಿಸಿಕೊಡುವಂತೆ ಭಗವಂತನಲ್ಲಿ ಪ್ರಾರ್ಥನೆ ಮಾಡಿಕೊಂಡೆ. ಪ್ರಾರ್ಥನೆ ಮಾಡಿದ ಸ್ವಲ್ಪ ಸಮಯದ ನಂತರ ರೊಟ್ಟಿಗಳು ಬಂದವು. ನಾನು ಎಣಿಸಿ ನೋಡಿದಾಗ ಕೇವಲ ಹದಿನೆಂಟು ರೊಟ್ಟಿಗಳು ಮಾತ್ರವೇ ಇದ್ದವು. ಭಗವಂತನ ಆಶ್ವಾಸನೆಯಂತೆ, ನಾನು ಕೊಟ್ಟ ಎರಡು ರೊಟ್ಟಿಗಳ ಹತ್ತು ಪಟ್ಟು ಎಂದರೆ, ಇಪ್ಪತ್ತು ರೊಟ್ಟಿಗಳು ಬರಬೇಕಾಗಿತ್ತು. ಅದಕ್ಕೇ ಆ ಹದಿನೆಂಟು ರೊಟ್ಟಿಗಳನ್ನು ಸ್ವೀಕರಿಸುವುದಕ್ಕೆ ನಾನು ಹಿಂಜರಿದೆ. ಅದಕ್ಕಾಗಿ ಸ್ವಲ್ಪಹೊತ್ತು ಕಾಯುತ್ತಿದ್ದೆ. ಅಷ್ಟರಲ್ಲಿ ಮಿಕ್ಕ ಎರಡು ರೊಟ್ಟಿಗಳೂ ಬಂದವು. ಭಗವಂತನ ಮಾತು ಸುಳ್ಳಾಗಲು ಸಾಧ್ಯವೆ?''

ರಬಿಯಾ ಭಗವಂತನ ಪ್ರತ್ಯಕ್ಷ ಸಾನ್ನಿಧ್ಯವನ್ನು ಅನುಭವಿಸುತ್ತಿದ್ದಳು. ಉನ್ನತ ಮಟ್ಟದ ಭಗವತ್ಪ್ರೇಮವನ್ನು ಭಾವಿಸುತ್ತಿದ್ದಳು. ಅವಳ ಒಂದು ಬೋಧನೆ ಹೀಗಿದೆ: ''ಓ ಮಾನವ, ಭಗವಂತನನ್ನು ನೋಡಲು ನೀನು ಕಾತರನಾಗಿದ್ದರೆ, ನಿನ್ನ ಕೂದಲನ್ನು ಕಿತ್ತುಕೊಳ್ಳುವಷ್ಟು, ಗೋಡೆಗೆ ನಿನ್ನ ತಲೆಯನ್ನು ಹೊಡೆದುಕೊಳ್ಳುವಷ್ಟು ವ್ಯಾಕುಲತೆ ನಿನ್ನಲ್ಲಿದ್ದರೆ – ಹಾಗಿದ್ದರೂ ಕೂಡ – ಸ್ವಲ್ಪ ಸಹನೆಯನ್ನು ತೋರಿಸು. ಭಗವಂತನು ಆ ಸಮಯದಲ್ಲಿಯೂ ನಿನ್ನೊಡನೆ ಇದ್ದೇ ಇದ್ದಾನೆ ಎಂಬ ಖಚಿತ ವಿಶ್ವಾಸವನ್ನು ಇಟ್ಟುಕೋ. ಅವನ ಸಾನ್ನಿಧ್ಯ ಮಾತ್ರವೇ ಅಂಥ ಕಾತರತೆಯನ್ನು ಭಕ್ತನಲ್ಲಿ ಉದ್ದೀಪನಗೊಳಿಸಬಲ್ಲದು.''

ನಿಜವಾದ ಪ್ರಾರ್ಥನೆಯನ್ನು ಮಾಡುವುದು ಹೇಗೆ ಎಂದು ಕೇಳಿದಾಗ ರಬಿಯಾ ಹೀಗೆ ಉತ್ತರವಿತ್ತಳು: ''ಪ್ರಾರ್ಥನೆಯ ಸಮಯದಲ್ಲಿ ಹೃದಯ ಪರಿಶುದ್ಧವಾಗುತ್ತದೆ. ಆಗ ಅದನ್ನು ಮುಕ್ತವಾಗಿ ಭಗವಂತನಿಗೆ ಅರ್ಪಿಸಬೇಕು.''

ರಬಿಯಾಳ ಅಂತಿಮ ದಿನಗಳ ಬಗ್ಗೆ ನಮಗೆ ಅಷ್ಟು ತಿಳಿದು ಬಂದಿಲ್ಲ. ಅವಳು ಕ್ರಿ.ಶ. ೭೫೩ರಲ್ಲಿ ಜೆರುಸಲೆಮ್ ನಗರದಲ್ಲಿ ಆಕೆ ದೇಹತ್ಯಾಗ ಮಾಡಿದಳು. ಪ್ರಸಿದ್ಧ ಸೂಫಿ ಕವಿ ಫರಿಯುದ್ದೀನ್ ಅತ್ತಾರ್ ರಬಿಯಾಳ ಉಪದೇಶಗಳನ್ನು ಸಂಗ್ರಹಿಸಿ, ಸಂರಕ್ಷಿಸಿದನು. ಹೀಗಾಗಿ ಆಕೆಯ ಬೋಧನೆಗಳಲ್ಲಿನ ಪವಿತ್ರತೆಯು ಇಂದಿಗೂ ಉಳಿದುಬಂದಿದೆ. ಎಂದೆಂದು ಅವುಗಳನ್ನು ಜನರು ಓದುತ್ತಾರೋ, ಅಂದೆಲ್ಲ ಅವರನ್ನು ಸ್ಫೂರ್ತಿಗೊಳಿಸುತ್ತವೆ.

ರಬಿಯಾಳ ಜೀವನ ಒಂದು ದಿವ್ಯ ಕಾವ್ಯ. ಆಕೆಯ ಉಪದೇಶಗಳು ರತ್ನದಷ್ಟು ಅಮೂಲ್ಯವಾದುವು. ಕಾಲ ಅವುಗಳ ಮಹತ್ವವನ್ನು ಎಂದಿಗೂ ಅಳಿಸಲಾಗದು, ಕಾರಣ ಆಕೆಯ ಜೀವನ ಮತ್ತು ಉಪದೇಶಗಳು ಅನಂತ ಪರಮಾತ್ಮನೆಡೆಗೆ ಜೀವಾತ್ಮನ ಉಡ್ಡಯಣದ ಪವಿತ್ರ ಮತ್ತು ನಿಸ್ಸಂದಿಗ್ಧ ದಾಖಲೆಗಳು. *

(ಆಧಾರ : ***Rabia – The Slave Girl,*** by Aga Syed Ibrahim Dara – Prabuddha Bharata, August 1933)

## ಯುವಚೇತನ



ಅನೇಕ ಎಕರೆಗಳಲ್ಲಿ ಹಬ್ಬಿರುವ ದೊಡ್ಡದೊಂದು ಆಲದ ಮರ ಬಹುಶಃ ಸಾಸಿವೆಕಾಳಿನ ಎಂಟನೇ ಒಂದು ಭಾಗದಷ್ಟು ಕೂಡ ದೊಡ್ಡದಾಗಿಲ್ಲದ ಅದರ ಸಣ್ಣ ಬೀಜದಲ್ಲಿತ್ತು . ಆ ಶಕ್ತಿಯ ಮೊತ್ತವೆಲ್ಲ ಅಲ್ಲಿ ಅಡಗಿತ್ತು. ಪ್ರಚಂಡ ಮೇಧಾಶಕ್ತಿ ಜೀವಾಣುವಿನಲ್ಲಿ ಸುಪ್ತವಾಗಿರುವುದು ನಮಗೆ ಗೊತ್ತಿದೆ. ಅನಂತ ಶಕ್ತಿ ಏಕೆ ಅಲ್ಲಿ ಇರಬಾರದು? ಅದು ಹಾಗಿರುವುದೆಂದು ನಮಗೆ ಗೊತ್ತಿದೆ. ಆ ಸತ್ಯ ವಿರೋಧಾಭಾಸದಂತೆ ನಮಗೆ ತೋರಬಹುದು. ಆದರೆ ಅದು ಸತ್ಯ . ನಾವೆಲ್ಲರೂ ಜೀವಾಣುವಿನಿಂದ ಬಂದಿರುವೆವು. ಈಗ ನಮ್ಮಲ್ಲಿರುವ ಎಲ್ಲಾ ಶಕ್ತಿಯೂ ಅಲ್ಲಿ ಸುಪ್ತವಾಗಿರುವುದು. ಅದೆಲ್ಲ ಆಹಾರದಿಂದ ಬಂದಿತೆಂದು ಹೇಳಲಾಗುವುದಿಲ್ಲ. ಆಹಾರವನ್ನು ನೀವು ಬೆಟ್ಟದಂತೆ ರಾಶಿ ಹಾಕಿದರೆ ಏನು ಶಕ್ತಿ ಉದ್ಭವಿಸುತ್ತದೆ? ಆ ಶಕ್ತಿ ಸುಪ್ತ ರೀತಿಯಲ್ಲಿ ಇತ್ತು . ಆದರೂ ಅಲ್ಲಿ ಶಕ್ತಿ ಇತ್ತು . ಅದರಂತೆಯೆ ಮಾನವನಿಗೆ ತಿಳಿಯಲಿ ತಿಳಿಯದೆ ಇರಲಿ ಅನಂತಶಕ್ತಿ ಅವನಾತ್ಮನಲ್ಲಿದೆ. ಅದರ ಅರಿವು ನಮಗೆ ಆದಾಗ ಅದು ಜಾಗ್ರತವಾಗುವುದು. *(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ.೨, ಪು.೨೮೬)*



# ಗರಿಗಳಲ್ಲಿ ಗೀತಾಮೃತ

ತೆಲುಗು ಮೂಲ: **ಡಾ. ಕೇತವರಪು ರಾಜ್ಯಶ್ರೀ**
ಅನುವಾದ: **ಗುರುಮೂರ್ತಿ ಪೆಂಡಕೂರು**
ಪ್ರಕಾಶಕರು: **ಯುವಕರ ಸಂಘ**, ರಾಮನಗರ, ಹಗರಿಬೊಮ್ಮನಹಳ್ಳಿ, ಬಳ್ಳಾರಿ ಜಿಲ್ಲೆ
ಪುಟಗಳು ೨೪+೬೦ = ೮೪.
ಬೆಲೆ. ರೂ. ೪೦-೦೦

**ಭ**ಗವದ್ಗೀತೆಯನ್ನು ಆಧರಿಸಿ ಬರೆದ ಕಾವ್ಯರೂಪದ ಕೃತಿಗಳು ವಿರಳ. ಗೀತೆಯ ತತ್ತ್ವಗಳನ್ನು, ಅಲ್ಲಿನ ಭಾವಗಳನ್ನು ಸಣ್ಣ ಕವಿತೆಗಳ ಮೂಲಕ ಹೃದ್ಯವಾಗಿ ನಮ್ಮ ಮುಂದಿಡುವ ಕೃತಿಯೇ '**ಗರಿಗಳಲ್ಲಿ ಗೀತಾಮೃತ.**'

ಈ ಕೃತಿಯ ಲೇಖಕಿ ಡಾ. ಕೇತವರಪು ರಾಜ್ಯಶ್ರೀಯವರದು ಬಹುಮುಖ ಪ್ರತಿಭೆಯ ವ್ಯಕ್ತಿತ್ವ. ಆಂಧ್ರಪ್ರದೇಶ ಸರಕಾರದ ಉಪ ಕಾರ್ಯದರ್ಶಿನಿ, ಲೇಖಕಿ, ಪತ್ರಕರ್ತೆ, ದೂರದರ್ಶನ ಮತ್ತು ಆಕಾಶವಾಣಿ ಕಲಾವಿದೆ, ವೀಣಾ ವಾದಕಿ ಮತ್ತು ಸಮಾಜಸೇವಕಿ - ಇಂತಹ ಹಲವಾರು ಪ್ರತಿಭೆಗಳ ಸಂಗಮ. ಇವರ ಅನೇಕ ಸ್ವರಚಿತ ಕಾವ್ಯ ಸಂಪುಟಗಳು ಮತ್ತು ಸಂಪಾದಿತ ಕೃತಿಗಳು ಪ್ರಕಟವಾಗಿವೆ. ಅನೇಕ ಪ್ರಶಸ್ತಿ, ಪುರಸ್ಕಾರಗಳು ಇವರ ಮುಡಿಗೇರಿವೆ.

ಇದನ್ನು ಕನ್ನಡಕ್ಕೆ ಅನುವಾದಿಸಿದ ಗುರುಮೂರ್ತಿ ಪೆಂಡಕೂರು ಅವರು ವ್ಯಾಪಾರದ ಜೊತೆಗೆ ಸಾಹಿತ್ಯ, ಶಿಕ್ಷಣ, ಸಂಶೋಧನೆ, ಅನುವಾದ ಹೀಗೆ ಹಲವಾರು ವಿಷಯಗಳಲ್ಲಿ ಪರಿಣಿತರಾಗಿದ್ದಾರೆ. ಭಗವದ್ಗೀತೆಯೆಂದರೆ ಆತ್ಮಜ್ಞಾನದ, ಭಕ್ತಿಯೋಗದ ದಾರಿದೀಪ ಮತ್ತು ಸತ್ಯದ ಅನಾವರಣ. ಮಾನವರೆಲ್ಲರಿಗೆ ಭಗವದ್ಗೀತೆಯು ಮಾರ್ಗದರ್ಶಿ. ಕುರುಕ್ಷೇತ್ರದಲ್ಲಿ ಮಹಾಭಾರತ ಸಂಗ್ರಾಮ ಪ್ರಾರಂಭವಾಗುವ ಮುನ್ನ ಕೃಷ್ಣಾರ್ಜುನರ ನಡುವೆ ನಡೆದ ಅಧ್ಯಾತ್ಮ ಮತ್ತು ಧರ್ಮದ ಸಂಭಾಷಣೆ ಅದು. ಮಹಾತ್ಮಗಾಂಧೀಜಿಯವರು ತಮ್ಮ ಜೀವನದಲ್ಲಿ ಭಗವದ್ಗೀತೆಯನ್ನು ಸಂಪೂರ್ಣವಾಗಿ ಅಳವಡಿಸಿಕೊಂಡಿದ್ದರು. ಇನ್ನು ಸ್ವಾಮಿ ವಿವೇಕಾನಂದರ ಪ್ರಕಾರ ಯಶಸ್ಸು ಮತ್ತು ಸೋಲುಗಳ ಪರಿವೆಯಿಲ್ಲದೆ, ನಿಸ್ವಾರ್ಥಭಾವದಿಂದ ಲೋಕೋದ್ಧಾರಕ್ಕಾಗಿ ದುಡಿಯುವವರಿಗೆ ದುಷ್ಟಶಕ್ತಿಗಳು ಏನೂ ಮಾಡಲಾರವು; ಆಸೆ ಆಕಾಂಕ್ಷೆಗಳಿಲ್ಲದೆ ಜೀವಿಸುವವರು ಪರಮಾನಂದವನ್ನು ಅನುಭವಿಸುವ ಕರ್ಮಯೋಗದ ರಹಸ್ಯ ಗೀತೆಯಲ್ಲಿದೆ ಎಂದು ಅವರು ಹೇಳುತ್ತಿದ್ದರು. ಧಮ್ಮಪದ, ಗೀತಾಂಜಲಿ, ಭಗವದ್ಗೀತೆಗಳು ನಮ್ಮನ್ನು ಧರ್ಮ, ಮೋಕ್ಷ, ಸಂನ್ಯಾಸಗಳ ಕಡೆಗೆ ತಿರುಗುವಂತೆ ಮಾಡಿವೆ. ಇಲ್ಲಿಯ ವಸ್ತು ಸನಾತನ; ಪ್ರಕ್ರಿಯೆ ಆಧುನಿಕವಾಗಿವೆ. ಭಗವದ್ಗೀತೆಯಂತಹ ಗ್ರಂಥವು ಜೀವನಧರ್ಮದ ಸಾರಕ್ಕೆ, ಜೀವನ ಲಕ್ಷ್ಯಕ್ಕೆ ರಾಜಮಾರ್ಗ. ಭಗವದ್ಗೀತೆಯ ವಿನಹ ಭಾರತವಿಲ್ಲ; ಭಾರತವಿಲ್ಲದಿದ್ದರೆ ಪ್ರಪಂಚವೇ ಇಲ್ಲ.

ಈ ಕೃತಿಯಲ್ಲಿ ಲೇಖಕಿ ಗೀತೆಯ ತತ್ತ್ವವನ್ನು ಸಾರುವ ೧೦೮ ಶ್ಲೋಕಗಳನ್ನು ಆರಿಸಿ, ಮೂಲದಲ್ಲಿಯ ಭಾವವನ್ನು, ಗೀತೆಯ ಮಾಧುರ್ಯವನ್ನು ಓದುಗರಿಗೆ ತಿಳಿಸಿಕೊಡುತ್ತಾರೆ.

ಉದಾಹರಣೆಗೆ, '**ವಾಸಾಂಸಿ ಜೀರ್ಣಾನಿ ಯಥಾ ವಿಹಾಯ**' ಎಂಬ ಶ್ಲೋಕವನ್ನು ಹೀಗೆ ತಿಳಿಸುತ್ತಾರೆ:

**ಚಿರಿಗಿನ ವಸ್ತ್ರಂವದಿಲಿ**
**ನೂತನ ವಸ್ತ್ರಂ ಧರಿಂಚಿನಟ್ಲು**

ಈ ಕೃತಿಯಲ್ಲಿ ಮುಖ್ಯವಾದ ಶ್ಲೋಕಗಳನ್ನು ಮಾತ್ರವೇ ಆರಿಸಿದ್ದಾರೆ. ವಿಷಯವು ಜಟಿಲವಾಗಿರಬಹುದು. ಆದರೆ ಭಾಷೆಯು ಕಠಿಣವಾದರೆ ಹೇಗೆ? ಇದನ್ನರಿತ ಲೇಖಕಿ ಸರಳವಾದ ಭಾಷೆಯಲ್ಲಿಯೇ ಬರೆದಿದ್ದಾರೆ. ಪದ್ಯವಾಗಲಿ, ಗೇಯವಾಗಲಿ, ವಚನವಾಗಲಿ ಕವಿತ್ವವೆಂದರೆ ಕವಿತ್ವವೇ; ಅದು ಅಸ್ವಾದಯೋಗ್ಯವಾಗಿ ಅಂತಶ್ಚೇತನಕ್ಕೆ ಕಾರಣವಾಗಬೇಕು. ಈ ಮಾತನ್ನು ಲೇಖಕಿ ನಿಜಗೊಳಿಸಿದ್ದಾರೆ. ಅನುವಾದ ಸರಳ, ಸುಲಭ ಗ್ರಾಹ್ಯವಾಗಿದೆ. ಈ ಸರಳೀಕೃತ ಭಾವವು ಎಲ್ಲರಿಗೂ ಅರ್ಥವಾಗುತ್ತದೆ. ಈ ಪ್ರಯತ್ನವು ಶ್ಲಾಘನೀಯವಾಗಿದೆ, ಮತ್ತು ಇದರಿಂದಾಗಿ ಲೇಖಕಿ ಅಭಿನಂದನಾರ್ಹರು. ಈ ಕೃತಿಯನ್ನು ಕುರಿತು ಅನೇಕ ಸಾಹಿತಿಗಳು, ಮಹನೀಯರುಗಳು ತಮ್ಮ ಮೆಚ್ಚುಗೆ ವ್ಯಕ್ತಪಡಿಸಿದ್ದಾರೆ.

ಭಗವದ್ಗೀತೆಯ ಧರ್ಮಾಮೃತವನ್ನು ಸರಳ, ಸುಂದರ, ಹೃದ್ಯವಾದ ಶೈಲಿಯಲ್ಲಿ ಸೃಜಿಸಿದ ಕವಿಯಿತ್ರಿಗೆ ಮನಸಾರೆ ಅಭಿನಂದನೆಗಳು. ಆಧ್ಯಾತ್ಮಿಕ ಜೀವನಕ್ಕೆ ಬೇಕಾದ ಸ್ಪಷ್ಟ ಪರಿಜ್ಞಾನವು ಇದರಲ್ಲಿ ವ್ಯಕ್ತಪಡಿಸಿದ್ದಾರೆ. ಇದರ ಭಾವವು ಎಲ್ಲೂ ಕಡಿಮೆಯಾಗದಂತೆ, ಮೂಲಕೃತಿಯ ಆಶಯಕ್ಕೆ ಕುಂದು ಉಂಟಾಗದಂತೆ ಸುಲಲಿತವಾಗಿ ಅನುವಾದಿಸಿಕೊಟ್ಟಿರುವ ಗುರುಮೂರ್ತಿ ಪೆಂಡಕೂರು ಅವರದೂ ಸ್ತುತ್ಯರ್ಹವಾದ ಪ್ರಯತ್ನ. ಅವರಿಂದ ಇನ್ನು ಇಂತಹ ರಚನೆಗಳು ಬರಲೆಂದು ಆಶೀರ್ವದಿಸಲೆಂದು ಪ್ರಾರ್ಥಿಸುತ್ತೇವೆ. *

*- ಜಾನಕಮ್ಮ*

**ಭಾರತೀಯ ಭಾವನೆಯ ಒಂದು ವೈಶಿಷ್ಟ್ಯವೇ ಅದರ ಶಾಂತಿ ಮತ್ತು ಮೌನ. ಅದರ ಹಿಂದೆ ಇರುವ ಅದ್ಭುತ ಶಕ್ತಿ ಎಂದಿಗೂ ಬಲಾತ್ಕಾರವಾಗಿ ಪ್ರದರ್ಶನವಾಗಲಿಲ್ಲ.**

*-ಸ್ವಾಮಿ ವಿವೇಕಾನಂದ*

# ನರಹರಿ

ಕಥೆ: ಸರಸ್ವತಿ ಮತ್ತು ರೇವತಿ

ಚಿತ್ರ: ಶಿವರಾಂ

1 ಪಂಡರಾಪುರದಲ್ಲಿ ನರಹರಿ ಎಂಬ ಅಕ್ಕಸಾಲಿಗನೊಬ್ಬ ವಾಸವಾಗಿದ್ದ. ಅವನು ತುಂಬ ನಿಪುಣನಾಗಿದ್ದ. ಪಂಡರಾಪುರದ ಅಧಿದೇವತೆ ಪಾಂಡುರಂಗ. ಆದರೆ ನರಹರಿ ಉಗ್ರ ಶಿವಭಕ್ತನಾಗಿದ್ದ.













5
ಒಂದು ಸಲ ನರಹರಿಯ ಮನೆಗೆ ಒಬ್ಬ ವ್ಯಕ್ತಿ ಬಂದ.
ವಿಠಲನಿಗೆ ಒಂದು ನಡುಪಟ್ಟಿಯನ್ನು ನಿನ್ನಿಂದ ಮಾಡಿಸಿಕೊಡಬೇಕು ಅಂತ ನನ್ನ ಪತ್ನಿ ತುಂಬ ಕಳಕಳಿಯಿಂದ ಪ್ರಾರ್ಥಿಸುತ್ತಿದ್ದಾಳೆ.
ನಾನೊಬ್ಬ ಶಿವಭಕ್ತ. ನೀವು ಇಷ್ಟೊಂದು ಪ್ರಾರ್ಥಿಸಿ ಕೊಂಡಿದ್ದರಿಂದ ನಾನು ಅದಕ್ಕೆ ಒಪ್ಪಿಕೊಂಡಿದ್ದೇನೆ. ನಾನು ವಿಷ್ಣುವಿನ ದೇವಾಲಯಕ್ಕೆ ಹೋಗುವುದಿಲ್ಲ. ಹಾಗಾಗಿ ನೀವೇ ದೇವಾಲಯಕ್ಕೆ ಹೋಗಿ ಬೇಕಾದ ಅಳತೆ ತೆಗೆದುಕೊಂಡು ಬರಬೇಕು.
ಧನ್ಯವಾದಗಳು. ನಾನು ಅಳತೆ ಮಾಡಿ ತರುತ್ತೇನೆ.


6
ನಡುಪಟ್ಟಿ ತಯಾರಾಯಿತು.
ನೀನು ಈ ನಡುಪಟ್ಟಿಯನ್ನು ಪಾಂಡುರಂಗನಿಗೆ ತೊಡಿಸಿ ಅಲಂಕರಿಸಿದೆಯಾ?
ಇಲ್ಲ. ಇದು ದೇವರ ಅಳತೆಗಿಂತ ಸ್ವಲ್ಪ ದೊಡ್ಡದಾಗಿದೆ. ಇದನ್ನು ಸರಿಪಡಿಸಲು ಮತ್ತೆ ನಿನ್ನ ಬಳಿಗೆ ತಂದಿದ್ದೇನೆ.
ಆಗಲಿ. ನಾನು ಇದನ್ನು ತುಸು ಚಿಕ್ಕದಾಗಿ ಮಾಡುತ್ತೇನೆ.


7
ಮರುದಿನ ...
ಈಗ ಸರಿಹೋಯಿತೆ?
ಇಲ್ಲ... ಈಗ ಅದು ಸಣ್ಣದಾಯಿತು. ನಿಮಗೆ ತೊಂದರೆ ಕೊಡುತ್ತಿದ್ದೇನೆ, ಕ್ಷಮಿಸಿ. ನೀವು ಒಂದರ್ಧ ನಿಮಿಷದ ಮಟ್ಟಿಗಾದರೂ ನಿಮ್ಮ ನಿರ್ಧಾರವನ್ನು ಸಡಿಲಿಸಿ ಅಲ್ಲಿಗೆ ಬಂದರೆ ಈ ಕಾರ್ಯ ಮುಗಿದಂತೆ. ದಯವಿಟ್ಟು ದೇವಾಲಯಕ್ಕೆ ಬಂದು ನೀವೇ ಅಳತೆ ನೋಡಿ.
ಓ! ಎಂಥ ಸಮಸ್ಯೆ ಇದು! ಆಗಲಿ. ಆದರೆ ನಾನು ವಿಠಲನ ಮುಂದೆ ಬಂದಾಗ ನನ್ನ ಕಣ್ಣುಗಳಿಗೆ ಬಟ್ಟೆ ಕಟ್ಟಿಕೊಳ್ಳುತ್ತೇನೆ.


8
ನರಹರಿ ತನ್ನ ಕಣ್ಣುಗಳಿಗೆ ವಸ್ತ್ರದ ಪಟ್ಟಿ ಕಟ್ಟಿಕೊಂಡು, ಪಾಂಡುರಂಗನ ದೇವಾಲಯದಲ್ಲಿ ಅಳತೆ ಮಾಡಿಕೊಂಡು ಬಂದ. ಹೊಸ ಅಳತೆಯ ಪ್ರಕಾರ ನಡುಪಟ್ಟಿಯನ್ನು ತಯಾರಿಸಿದ್ದಾಯಿತು. ಈಗಲೂ ಅದು ಸರಿಹೊಂದಲಿಲ್ಲ.


9
ಜನ ಏಕೆ ನಿನ್ನನ್ನು ಇಷ್ಟೊಂದು ಹೊಗಳುತ್ತಾರೋ ಗೊತ್ತಿಲ್ಲ! ಒಂದು ನಡುಪಟ್ಟಿಯನ್ನೂ ನೀನು ಸರಿಯಾಗಿ ಮಾಡಲಾರೆಯಾ? ಇದೂ ಕೂಡ ದೊಡ್ಡದಾಯಿತು.
ಪರಮೇಶ್ವರ! ನನ್ನನ್ನೇಕೆ ಪರೀಕ್ಷಿಸುತ್ತಿದ್ದೀ?
ಆಗಲಿ. ನಾನೇ ದೇವಾಲಯಕ್ಕೆ ಹೋಗಿ ಅಳತೆ ನೋಡಿ, ಅದನ್ನು ಸರಿಪಡಿಸುತ್ತೇನೆ.


10 ದೇವಾಲಯದಲ್ಲಿ ನರಹರಿ ತನ್ನ ಕಣ್ಣುಗಳಿಗೆ ಬಟ್ಟೆ ಕಟ್ಟಿ, ಪಾಂಡುರಂಗನ ವಿಗ್ರಹವನ್ನು ಸ್ಪರ್ಶಿಸಿದ.
ಪರಮೇಶ್ವರಾ! ಅಮರನಾಥದ ಹಿಮಲಿಂಗವನ್ನು ಸ್ಪರ್ಶಿಸಿದಂತೆ ನನಗನ್ನಿಸುತ್ತಿದೆಯಲ್ಲಾ! ಎಂಥ ವಿಚಿತ್ರ! ಇದು ದೇವರ ಕೊರಳೆ? ರುದ್ರಾಕ್ಷಿಯಂತಿದೆಯಲ್ಲ! ಕೈಗಳಲ್ಲಿ ಡಮರು ಇದ್ದಂತಿದೆ! ಇದು ಶಿವನ ವಿಗ್ರಹವೇ ಇರಬೇಕು.


11 ಅದು ಶಿವನವಿಗ್ರಹವೆಂದೇ ಭಾವಿಸಿ ನರಹರಿ ಕಣ್ಣಿನ ಪಟ್ಟಿಯನ್ನು ಬಿಚ್ಚಿದ.
ಓ! ಇದು ಪಾಂಡು ರಂಗನೆ! ನಾನು ಮೋಸಹೋದೆ.


12 ಅವನು ಮತ್ತೆ ತನ್ನ ಕಣ್ಣುಗಳಿಗೆ ಬಟ್ಟೆ ಕಟ್ಟಿ, ಪಾಂಡುರಂಗನನ್ನು ಸ್ಪರ್ಶಿಸಿದ.
ಜಟಾಜೂಟ, ಗಂಗೆ, ಚಂದ್ರ! ಇದು ಖಂಡಿತ ಪಾಂಡುರಂಗನಲ್ಲ; ನನ್ನ ಶಿವನೇ ಇದು!

**13** ಪದೇ ಪದೇ ಈ ಅನುಭವವಾಯಿತು. ಕೊನೆಗೆ ನರಹರಿಯ ಮುಂದೆ ಶಿವ, ಪಾಂಡುರಂಗ ಇಬ್ಬರೂ ಪ್ರತ್ಯಕ್ಷರಾದರು. ನರಹರಿ ಮೈಮೇಲೆ ಪ್ರಜ್ಞೆ ಕಳೆದುಕೊಂಡ.

**14** ನರಹರಿ ಕಣ್ತೆರೆದು ಪಾಂಡುರಂಗನ ನಡುಪಟ್ಟಿಯನ್ನು ಸರಿಪಡಿಸಿದ. ಈಗ ಅದು ವಿಗ್ರಹಕ್ಕೆ ಸರಿಹೊಂದುತ್ತಿತ್ತು.




**15**



ನರಹರಿಯು ವೈಷ್ಣವರ 'ವಾರ್ಕರಿ' ಸಂಪ್ರದಾಯವನ್ನು ಅನುಸರಿಸಿದ. ಅವರಲ್ಲಿ ವಿವಿಧ ದೇವತೆಗಳ ನಡುವೆ, ವಿವಿಧ ಪಂಥಗಳ ಪೂಜಾಕ್ರಮಗಳ ನಡುವೆ ಯಾವುದೇ ಭೇದವಿಲ್ಲ.

**16** ಯಾರು ಎಲ್ಲವನ್ನೂ ಸಮರಸಗೊಳಿಸುತ್ತಾನೋ ಅವನೇ ನಿಜವಾದ ಮನುಷ್ಯ. ಬಹುಪಾಲು ಮಂದಿ ಪಕ್ಷಪಾತಿಗಳು. ಆದರೆ ಎಲ್ಲ ಅಭಿಪ್ರಾಯಗಳೂ ಒಂದೇ ಗುರಿಯತ್ತ ಸಾಗುವುದನ್ನೇ



ನಾನು ಕಂಡಿದ್ದೇನೆ. ಶಾಕ್ತ, ವೈಷ್ಣವ, ವೇದಾಂತ - ಎಲ್ಲದರ ಗುರಿ ಒಂದೇ. ಅವನೇ ನಿರಾಕಾರ, ಅವನೇ ಸಾಕಾರ. ಅವನೇ ನಾನಾ ಬಗೆಯ ರೂಪಗಳಲ್ಲಿ ಕಾಣಿಸಿಕೊಳ್ಳುತ್ತಾನೆ.

-ಶ್ರೀರಾಮಕೃಷ್ಣ







# ಕರ್ನಾಟಕ ಭಾವ ಪ್ರಚಾರ ಪರಿಷತ್ತಿನ ದ್ವಿತೀಯ ವಾರ್ಷಿಕ ಸಮ್ಮೇಳನ

ಕರ್ನಾಟಕ ರಾಜ್ಯದ ಸ್ವತಂತ್ರ ಆಶ್ರಮಗಳ ಮತ್ತು ಭಕ್ತ ಜನರ ಸತ್ಸಂಗ ಕೇಂದ್ರಗಳ ಸಾಂಘಿಕ ಸ್ವರೂಪವಾದ **‘ರಾಮಕೃಷ್ಣ-ವಿವೇಕಾನಂದ ಭಾವ ಪ್ರಚಾರ ಪರಿಷತ್’** ಇದೇ ೨೦೧೫ರ ಡಿಸೆಂಬರ್ ೧೧ ಮತ್ತು ೧೨ ದಿನಾಂಕಗಳಲ್ಲಿ ತನ್ನ ದ್ವಿತೀಯ ವಾರ್ಷಿಕ ಸಮ್ಮೇಳನವನ್ನು ಅತ್ಯಂತ ಯಶಸ್ವಿಯಾಗಿ ನೆರವೇರಿಸಿತು. ಶಿವಮೊಗ್ಗೆಯ ಶ್ರೀ **ಶಾರದಾದೇವಿ ಅಂಧರ ವಿಕಾಸ ಕೇಂದ್ರ**ವು ಆತಿಥೇಯ ಸಂಸ್ಥೆಯಾಗಿದ್ದುಕೊಂಡು, ಈ ಸಮ್ಮೇಳನವನ್ನು ‘ಆದಿಚುಂಚನಗಿರಿ ಸಮುದಾಯ ಭವನ’ದಲ್ಲಿ ಅಚ್ಚುಕಟ್ಟಾಗಿ ಆಯೋಜಿಸಿತು.

ಎರಡು ದಿನಗಳ ರಾಜ್ಯಮಟ್ಟದ ಈ ಸಮ್ಮೇಳನವನ್ನು ಕೋಲ್ಕತ್ತಾದ ಬೇಲೂರು ಮಠದ ಪ್ರತಿನಿಧಿಯಾಗಿ, ಪ್ರಸ್ತುತ ಆಂಧ್ರಪ್ರದೇಶದ ವಿಶಾಖಪಟ್ಟಣದ ರಾಮಕೃಷ್ಣ ಮಿಷನ್ನಿನ ಮುಖ್ಯಸ್ಥರೂ, ಆಂಧ್ರಪ್ರದೇಶ ಭಾವ ಪ್ರಚಾರ ಪರಿಷತ್ತಿನ ಅಧ್ಯಕ್ಷರೂ ಆದ ಪೂಜ್ಯ ಸ್ವಾಮಿ ಆತ್ಮವಿದಾನಂದಜಿ ಉದ್ಘಾಟಿಸಿದರು. ಕರ್ನಾಟಕ ರಾಜ್ಯದ ಭಾವಪ್ರಚಾರ ಪರಿಷತ್ತಿನ ಅಂಗಸಂಸ್ಥೆಗಳ ಕಾರ್ಯ ಚಟುವಟಿಕೆಗಳನ್ನು ಮುಕ್ತಕಂಠದಿಂದ ಶ್ಲಾಘಿಸಿ, ದಿವ್ಯತ್ರಯರ ಜೀವನ-ಸಂದೇಶಗಳನ್ನು ಜನಮಾನಸಕ್ಕೆ ಮುಟ್ಟಿಸುವ **‘ಜ್ಞಾನಯಜ್ಞ’**ಕ್ಕೆ ಒತ್ತು ನೀಡಲು ಅವರು ಮನವಿ ಮಾಡಿದರು.

ತಮಿಳುನಾಡಿನ ಉದಕಮಂಡಲದ ರಾಮಕೃಷ್ಣ ಮಠದ ಮುಖ್ಯಸ್ಥರಾದ ಪೂಜ್ಯ ಸ್ವಾಮಿ ರಾಘವೇಶಾನಂದಜಿರವರು ಮುಂದಿನ ವರ್ಷದಲ್ಲಿ ಲಕ್ಷಾಂತರ ಮನೆಗಳಿಗೆ ‘ಶ್ರೀರಾಮಕೃಷ್ಣ ವಚನವೇದ’ ಸದ್ಗ್ರಂಥವನ್ನು ತಲುಪಿಸುವುದಲ್ಲದೆ, ಪರಿಷತ್ತಿನ ಶಾಖೆಗಳು ‘ಬಾಲಕ ಸಂಘ’ಗಳನ್ನು ಪ್ರಾರಂಭಿಸಿ, ಪುಟ್ಟ ಮಕ್ಕಳ ಹಾಗೂ ವಿದ್ಯಾರ್ಥಿಗಳ ವ್ಯಕ್ತಿತ್ವವನ್ನು ರೂಪಿಸುವ ಗುರುತರ ಹೊಣೆಗಾರಿಕೆಯನ್ನು ನಿರ್ವಹಿಸಬೇಕು ಎಂದರು.

ಮೈಸೂರಿನ ಶ್ರೀ ರಾಮಕೃಷ್ಣ ಆಶ್ರಮದ ಅಧ್ಯಕ್ಷರೂ ಬೇಲೂರು ಮಠದ ಟ್ರಸ್ಟಿಗಳೂ ಆದ ಪೂಜ್ಯ ಸ್ವಾಮಿ ಮುಕ್ತಿದಾನಂದಜಿರವರು ಮಾತನಾಡುತ್ತ, ಇಂದಿನ ಯುವಸಮೂಹಕ್ಕೆ ಸ್ವಾಮಿ ವಿವೇಕಾನಂದರ ಶಕ್ತಿಯುತ ಸಂದೇಶಗಳನ್ನು ತಲುಪಿಸುವಲ್ಲಿ ಶಿಕ್ಷಕರು ಮಹತ್ತರ ಪಾತ್ರ ವಹಿಸಬೇಕು ಎಂದು ಅಭಿಪ್ರಾಯಪಟ್ಟರು.

ಒಂದು ಸಹಸ್ರ ಕಾಲೇಜು ವಿದ್ಯಾರ್ಥಿಗಳಿಗಾಗಿ ಏರ್ಪಾಡಿಸಲಾಗಿದ್ದ **ಯುವ ಸಮ್ಮೇಳನ**ದಲ್ಲಿ ಪೂಜ್ಯ ಸ್ವಾಮಿ ಮಂಗಳನಾಥಾನಂದಜಿ ಮತ್ತು ಶ್ರೀ ಸೂಲಿಬೆಲೆ ಚಕ್ರವರ್ತಿಯವರು ಉಪನ್ಯಾಸ ನೀಡಿದರು. **ಶಿಕ್ಷಕರ ಸಮ್ಮೇಳನ**ದಲ್ಲಿ ಸುಮಾರು ೯೦೦ ಶಿಕ್ಷಕರು ಡಾ. ಎಚ್. ಎನ್. ಮುರಳೀಧರ್ ಅವರ ಉಪನ್ಯಾಸವನ್ನು ಆಸ್ವಾದಿಸಿದರು. ಡಿಸೆಂಬರ್ ೧೨ರಂದು ಮೂಡಿಬಂದ **‘ಭಕ್ತ ಸಮ್ಮೇಳನ’** ದಲ್ಲಿ ಸುಮಾರು ೬೦೦ ಸ್ಥಳೀಯ ಭಕ್ತ ಪ್ರತಿನಿಧಿಗಳು ಹಾಗು ಪರಸ್ಥಳಗಳಿಂದ ಆಗಮಿಸಿದ ಸುಮಾರು ೪೦೦ ಪ್ರತಿನಿಧಿಗಳು ಭಾಗವಹಿಸಿದರು.

ದಿವ್ಯತ್ರಯರ ಸ್ಮರಣೋತ್ಸವ ಕಾರ್ಯಕ್ರಮಗಳಲ್ಲಿ ಪೊನ್ನಂಪೇಟೆಯ ಪೂಜ್ಯ ಸ್ವಾಮಿ ಬೋಧಸ್ವರೂಪಾನಂದಜಿ, ರಾಣೆಬೆನ್ನೂರಿನ ಪೂಜ್ಯ ಸ್ವಾಮಿ ಪ್ರಕಾಶಾನಂದಜಿ, ಬೆಂಗಳೂರಿನ ಪೂಜ್ಯ ಮಾತಾಜಿ ವಿವೇಕಮಯಿ, ಚಳ್ಳಕೆರೆಯ ಪೂಜ್ಯ ಮಾತಾಜಿ ತ್ಯಾಗಮಯಿ, ಆಂಧ್ರಪ್ರದೇಶದ ಗುಂಟೂರಿನ ಪೂಜ್ಯ ಪ್ರವ್ರಾಜಿಕ ಭವಾನಿಪ್ರಾಣ ಮಾತಾಜಿ, ಮಂಗಳೂರಿನ ಪೂಜ್ಯ ಸ್ವಾಮಿ ಜಿತಕಾಮಾನಂದಜಿ ಹಾಗೂ ತುಮಕೂರಿನ ಪೂಜ್ಯ ಸ್ವಾಮಿ ವೀರೇಶಾನಂದ ಸರಸ್ವತೀ ಪ್ರವಚನಗಳನ್ನು ನೀಡಿದರು.

‘ಶ್ರೀ ಶಾರದಾದೇವಿ ಅಂಧರ ವಿಕಾಸ ಕೇಂದ್ರ’ದ ಅಂಧ ಮಕ್ಕಳು ನೆರವೇರಿಸಿಕೊಟ್ಟ ಭಜನೆ, ನೃತ್ಯ ಹಾಗು ಯಕ್ಷಗಾನವೇ ಮೊದಲಾದ ಸಾಂಸ್ಕೃತಿಕ ಕಾರ್ಯಕ್ರಮಗಳು ಭಕ್ತ ಜನರನ್ನು ಮಂತ್ರಮುಗ್ಧರನ್ನಾಗಿಸಿತು.

ವಾರ್ಷಿಕ ಸಮ್ಮೇಳನದಲ್ಲಿ ಸುಮಾರು ೪೦ ಸಂನ್ಯಾಸಿಗಳು ಹಾಗು ಸಂನ್ಯಾಸಿನಿಯರು, ೧೩ ಬ್ರಹ್ಮಚಾರಿಗಳು ಭಾಗವಹಿಸಿದ್ದರು. ಎರಡೂ ದಿನಗಳ ಕಾರ್ಯಕ್ರಮಗಳಲ್ಲಿ ಸುಮಾರು ರೂ. ೨.೫ ಲಕ್ಷ ಮೌಲ್ಯದ ಸಾಹಿತ್ಯ ಪುಸ್ತಕಗಳು ಮಾರಾಟಗೊಂಡವು.



## ರಾಮಕೃಷ್ಣ ಮಿಷನ್ ಆಡಳಿತ ಮಂಡಳಿಯ ವಾರ್ಷಿಕ ವರದಿಯ ಸಾರಾಂಶ - ೨೦೧೪-೨೦೧೫

ರಾಮಕೃಷ್ಣ ಮಿಷನ್ ಆಡಳಿತ ಮಂಡಳಿಯ **೧೦೬-ನೇ ವಾರ್ಷಿಕ ಸಾಧಾರಣ ಸಭೆಯು** ರವಿವಾರ, ದಿನಾಂಕ ೨೭ನೇ ಡಿಸೆಂಬರ್ ೨೦೧೫ ರಂದು ಮಧ್ಯಾಹ್ನ ೩.೩೦ ಕ್ಕೆ ಬೇಲೂರು ಮಠದಲ್ಲಿ ನೆರವೇರಿತು.

ಅಂತರ್-ಸಾಂಸ್ಕೃತಿಕ ಸಂವಾದ, ಸಾಮಾಜಿಕ ಬಂಧ ಮತ್ತು ಶಾಂತಿ-ಅಹಿಂಸೆಯ ಸಂಸ್ಕೃತಿಯ ಕ್ಷೇತ್ರಗಳಲ್ಲಿ **ಯುನೆಸ್ಕೋ** ರಾಮಕೃಷ್ಣ ಮಿಷನ್ ನೊಂದಿಗೆ ೬ ವರ್ಷಗಳ *ಔಪಚಾರಿಕ* ಸಂಬಂಧವನ್ನು ಕೈಗೊಂಡಿದೆ. ಪಶ್ಚಿಮ ಬಂಗಾಳದ ಮುಖ್ಯಮಂತ್ರಿಯವರಿಂದ ಉದ್ದೇಶಿತ **ವಿವೇಕ ತೀರ್ಥ**, *ಸೆಂಟರ್ ಫಾರ್ ಹ್ಯೂಮನ್ ಎಕ್ಸೆಲೆನ್ಸ್ ಎಂಡ್ ಸೋಶಿಯಲ್ ಸೈನ್ಸಸ್*, ರಾಜಾರ್‌ಹಾಟ್, ನ್ಯೂ ಟೌನ್, ಕೊಲ್ಕತ್ತಾ ಕಟ್ಟಡಕ್ಕೆ ಶಿಲಾನ್ಯಾಸ ನೆರವೇರಿತು. ಆರೋಗ್ಯ ಕ್ಷೇತ್ರದ ನೌಕರರಿಗೆ ಮಧುಮೇಹ ಕುರಿತಾಗಿ ಶಿಕ್ಷಣ ನೀಡುವಲ್ಲಿ **ವೃಂದಾವನ** ಕೇಂದ್ರ ರೂಪಿಸಿದ *ಸರ್ಟಿಫೈಡ್ ಡಯಾಬಿಟಿಸ್ ಎಜುಕೇಟರ್-ಇಂಡಿಯಾ (ಸಿ.ಡಿ.ಇ.ಐ)* ಕಾರ್ಯಕ್ಕೆ ಅಂತರರಾಷ್ಟ್ರೀಯ ಮಧುಮೇಹ ಸಂಸ್ಥೆ (ಐ.ಡಿ.ಎಫ್.), ಬ್ರುಸೆಲ್ಸ್, ಬೆಲ್ಜಿಯಂ ತನ್ನ ಅನುಮೋದನೆಯನ್ನು ನೀಡಿದೆ.

ಈಶಾನ್ಯ ಭಾರತದಲ್ಲಿ **ಶಿಲ್ಲೋಂಗ್** ಕೇಂದ್ರದ ಅತ್ಯುತ್ತಮ ಸೇವೆಯನ್ನು ಪರಿಗಣಿಸಿ ಕ್ರೈಸ್ಟ್ ಸ್ಕೂಲ್ ಇಂಟರ್‌ನ್ಯಾಶನಲ್ ಮತ್ತು ಡೋನ್ ಬೋಸ್ಕೋ ಸೆಂಟರ್ ಫಾರ್ ಇಂಡಿಜಿನಸ್ ಕಲ್ಚರ್ ಸಂಸ್ಥೆಗಳು *ಯುಥ್ ಎಂಡ್ ಎಜುಕೇಶನ್-೨೦೧೪* ಪಾರಿತೋಷಕವನ್ನು ನೀಡಿವೆ. ಸ್ವಚ್ಛತೆಗೆ ಸದಾ ಗಮನ ನಮ್ಮ ವಿಶೇಷತೆ. ಈ ದಿಸೆಯಲ್ಲಿ ನಮ್ಮ ಕಾರ್ಯವನ್ನು ಭಾರತ ಸರಕಾರದ *ಸ್ವಚ್ಛ ಭಾರತ ಅಭಿಯಾನ*ದ ಅಡಿಯಲ್ಲಿ ವಿಶೇಷವಾಗಿ ಗುರುತಿಸಲಾಗಿದೆ. ನಮ್ಮ ಕೇಂದ್ರಗಳು ಅಭಿಯಾನವನ್ನು ಯಶಸ್ವಿಗೊಳಿಸುವಲ್ಲಿ ಉತ್ಸಾಹದಿಂದ ಪಾಲ್ಗೊಂಡವು.

೨೦೧೦-೨೦೧೪ ರವರೆಗೆ ದೇಶದ ವಿವಿಧೆಡೆಗಳಲ್ಲಿ ನಾಲ್ಕು-ವರ್ಷಗಳ ಸೇವಾಕಾರ್ಯಗಳನ್ನು ಕೈಗೊಳ್ಳಲಾಯಿತು. ಕೇಂದ್ರ ಸರಕಾರದ ನೆರವಿನಿಂದ ಜರುಗಿದ ಈ ಯೋಜನಾಕಾರ್ಯಗಳಿಗೆ ೯೩ ಕೋಟಿ ರೂಪಾಯಿಗಳನ್ನು ವ್ಯಯಿಸಲಾಯಿತು. ಇದರ ಜೊತೆಗೆ ಸಂಕ್ಷಿಪ್ತ ವರದಿಯನ್ನು ನೀಡಲಾಗಿದೆ.

**ಶಿಮ್ಲಾ,** ಹಿಮಾಚಲ ಪ್ರದೇಶದಲ್ಲಿ ರಾಮಕೃಷ್ಣ ಮಿಷನ್ನಿನ ನೂತನ ಶಾಖಾ ಕೇಂದ್ರವನ್ನು ಪ್ರಾರಂಭಿಸಲಾಗಿದೆ. **ಸಾರಗಾಛಿ** ಕೇಂದ್ರದ ಶಾಖಾ ಕೇಂದ್ರವಾಗಿ 'ಸೇವಾವ್ರತ', **ಬೈರಗಾಛಿ** ಗ್ರಾಮ, ಮುರ್ಶಿದಾಬಾದ್ ಜಿಲ್ಲೆ, ಪಶ್ಚಿಮ ಬಂಗಾಳ ರಾಜ್ಯ ಕೇಂದ್ರವನ್ನು ಪ್ರಾರಂಭಿಸಲಾಯಿತು. ಭಾರತದ ಹೊರಗೆ, **ಜೆಸ್ಸೋರ್**(ಬಾಂಗ್ಲಾದೇಶ) ಕೇಂದ್ರದ ಶಾಖಾ ಕೇಂದ್ರವೊಂದನ್ನು ಬಾಂಗ್ಲಾದೇಶದ **ನರೈಲ್** ಎಂಬಲ್ಲಿ ಪ್ರಾರಂಭಿಸಲಾಯಿತು.

**ಶೈಕ್ಷಣಿಕ ಕ್ಷೇತ್ರದಲ್ಲಿ** ಈ ಕೆಳಗಿನ **ಹೊಸ ಪ್ರಗತಿಗಳು** ಉಲ್ಲೇಖನೀಯ:

(೧) **ಆಲೋ** (ಅರುಣಾಚಲ ಪ್ರದೇಶ), **ಚೆನ್ನೈ ಮಿಷನ್ ಆಶ್ರಮ** (ತಮಿಳುನಾಡು), **ದೇವಘರ್** (ಜಾರ್ಖಂಡ) - ಇಲ್ಲಿಯ ನಮ್ಮ ಶಾಖೆಗಳಲ್ಲಿ ಸ್ಮಾರ್ಟ್ ಕ್ಲಾಸ್ (ಕಂಪ್ಯೂಟರ್ ಆಧಾರಿತ ಶಿಕ್ಷಣ ಉಪಕರಣಗಳು) ಸೌಲಭ್ಯಗಳನ್ನು ಪ್ರಾರಂಭಿಸಲಾಯಿತು. (೨) **ಕರೀಮ್‌ಗಂಜ್** (ಅಸ್ಸಾಮ್) ಕೇಂದ್ರದಲ್ಲಿ *ಕಂಪ್ಯೂಟರ್* ತರಬೇತಿ ಸಂಸ್ಥೆಯೊಂದನ್ನು ಆರಂಭಿಸಲಾಯಿತು. (೩) ಮಕ್ಕಳಿಗೆ ಮೌಲ್ಯಶಿಕ್ಷಣ ನೀಡಲು **ದೆಹಲಿ**ಯ ಕೇಂದ್ರವು ದೆಹಲಿ ಎನ್.ಸಿ.ಆರ್., ಭೋಪಾಲ್, ಹೈದರಾಬಾದ್, ಚೆನ್ನೈ, ಮತ್ತು ಕೋಲ್ಕತ್ತಾಗಳಲ್ಲಿ ೭೦೦ ಸಿ.ಬಿ.ಎಸ್.ಸಿ ಶಾಲೆಗಳ ೧೭೦೦ ಶಿಕ್ಷಕರಿಗೆ ತರಬೇತಿ ನೀಡಿತು. (೪) **ಗುವಾಹಟಿ** ಕೇಂದ್ರವು ಅಸ್ಸಾಮೀ ಭಾಷೆಯಲ್ಲಿ *ವಿವೇಕ ಭಾಸ್ಕರ* ಎಂಬ ಚಾತುರ್ಮಾಸಿಕವನ್ನು ಪ್ರಾರಂಭಿಸಿತು.

**ವೈದ್ಯಕೀಯ ಕ್ಷೇತ್ರದಲ್ಲಿ** ಈ ಕೆಳಗಿನ **ಹೊಸ ಪ್ರಗತಿಗಳು** ಉಲ್ಲೇಖನೀಯ:

(೧) **ಲಖ್ನೌ** ಆಸ್ಪತ್ರೆಯಲ್ಲಿ ಆಧುನಿಕ ಸೌಲಭ್ಯಗಳಿರುವ ಎರಡು ಮೊಡ್ಯುಲರ್ ಓಪರೇಶನ್ ಥಿಯೇಟರ್ ಮತ್ತು ಒಂದು ಹೊಸ ಆಕ್ಯುಪಂಕ್ಚರ್ ಕ್ಲಿನಿಕ್ (೨) **ಕೋಲ್ಕತಾದ ಸೇವಾ ಪ್ರತಿಷ್ಠಾನ**ದಲ್ಲಿ ಹೃದಯ ತಪಾಸಣಾ ಕೇಂದ್ರ, (೩) **ವೃಂದಾವನ** ಕೇಂದ್ರದಲ್ಲಿ ಹೊಸ ತುರ್ತುಚಿಕಿತ್ಸಾ ಘಟಕ (೪) **ದೆಹಲಿ** ಕೇಂದ್ರದ ಟಿಬಿ ಕ್ಲಿನಿಕ್ ನಲ್ಲಿ ಫಂಡಸ್ ಫ್ಲುರೆಸೀನ್ ಎಂಜಿಯೋಗ್ರಫಿ (ಎಫ್.ಎಫ್.ಎ.) ಉಪಕರಣವನ್ನು ಮೇಲ್ದರ್ಜೆಗೆ ಏರಿಸಲಾಯಿತು.

**ಗ್ರಾಮೀಣಾಭಿವೃದ್ಧಿ ಕ್ಷೇತ್ರದಲ್ಲಿ** ಈ ಕೆಳಗಿನ **ಹೊಸ ಯೋಜನೆಗಳು** ಉಲ್ಲೇಖನೀಯ:

(೧) **ರಾಂಚಿ,** ಮೊರಾಬಾದಿ ಕೇಂದ್ರ, ಐ.ಡಬ್ಲ್ಯೂ.ಎಮ್. ಪಿ-ಯ (ಇಂಟಿಗ್ರೇಟೆಡ್ ವಾಟರ್‌ಶೆಡ್ ಮ್ಯಾನೇಜ್‌ಮೆಂಟ್) ಕಾರ್ಯದ ಅಂಗ ವಾಗಿ *೨೨೮ ಪರ್ಕೋಲೇಶನ್ ಟ್ಯಾಂಕ್‌ಗಳನ್ನು* ನಿರ್ಮಾಣ ಮಾಡಿತು. ಗುರುತ್ವಾಕರ್ಷಣಾಧಾರಿತ ಜಲವಿತರಣಾ ವ್ಯವಸ್ಥೆಯನ್ನು ಅಂಗಾರಾ ಬ್ಲಾಕಿನ ಪಿಪ್ರಾಬೇರಾ, ಸಿಮ್ರಾಬೇರಾ, ರುಪು ಮತ್ತು ಝುರ್ನಾ ಪಾನಿ ಗ್ರಾಮಗಳಲ್ಲಿ ನಿರ್ಮಾಣ ಮಾಡಿತು. (೨) ಆಂಧ್ರಪ್ರದೇಶದ ಪೂರ್ವ ಗೋದಾವರಿ ಜಿಲ್ಲೆಯ ರಂಪಾಚೋದವರಮ್ ನಲ್ಲಿ ಸ್ಥಳೀಯ ಗುಡ್ಡಗಾಡು ಜನರಿಗಾಗಿ **ರಾಜಮುಂಡ್ರಿ** ಕೇಂದ್ರದ ವತಿಯಿಂದ ಗಂಟೆಗೆ ೨೦೦ ಲೀಟರ್ ಸಾಮರ್ಥ್ಯದ ಜಲಸಂಸ್ಕರಣ ಘಟಕವನ್ನು ಸ್ಥಾಪಿಸಲಾಯಿತು. (೩) **ನಾರಾಯಣಪುರ** ಕೇಂದ್ರವು ಹಲವಾರು ಯೋಜನೆಗಳನ್ನು ಹಮ್ಮಿಕೊಂಡು ೬ ಗ್ರಾಮ, ೨೦ ಅಂಗನವಾಡಿ ಮತ್ತು ೬೦೦ ಮಕ್ಕಳಿಗಾಗಿ ೧೦೫ ಹೆಕ್ಟೇರ್ ಪ್ರದೇಶದಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಪ್ರಾರಂಭಿಸಿದೆ.

**ರಾಮಕೃಷ್ಣ ಮಠಕ್ಕೆ ಸಂಬಂಧಿಸಿದಂತೆ ಈ ಕೆಳಗಿನ ಹೊಸ ಯೋಜನೆಗಳು ಉಲ್ಲೇಖನೀಯ:**

(೧) **ಬಾಗ್‌ಬಝಾರ್** (ಪಶ್ಚಿಮ ಬಂಗಾಳ) ಕೇಂದ್ರದಲ್ಲಿ *ಮಾ ಶಾರದಾ ವೊಕೇಶನಲ್ ಟ್ರೇನಿಂಗ್ ಸೆಂಟರ್* ಪ್ರಾರಂಭಿಸಲಾಯಿತು; (೨) **ಪಾಲೈ** (ಕೇರಳ) ಆಶ್ರಮದಲ್ಲಿ ನೂತನವಾಗಿ ನಿರ್ಮಿಸಿದ ಹೋಮಿಯೋಪಥಿ ಡಿಸ್ಪೆನ್ಸರಿಯನ್ನು ಉದ್ಘಾಟಿಸಲಾಯಿತು; (೩) **ಪೊನ್ನಂಪೇಟೆ** (ಕರ್ನಾಟಕ) ಕೇಂದ್ರವು ಹೊಲಿಗೆ, ಬಟ್ಟೆ ನೇಯ್ಗೆ, ವಾಹನ ಚಾಲನೆ, ನೈಸರ್ಗಿಕ ಚಿಕಿತ್ಸಾ ಸಹಾಯಕರಿಗೆ ತರಬೇತಿ ನೀಡುವ ಹೊಸ ವೊಕೇಶನಲ್ ಟ್ರೇನಿಂಗ್ ಸೆಂಟರ್‌ಅನ್ನು ಪ್ರಾರಂಭಿಸಿತು; (೪) **ವಡೋದರ** (ಗುಜರಾತ್) ಕೇಂದ್ರದಲ್ಲಿ ದುರಸ್ತಿಗೊಳಿಸಿದ *ದಿಲಾರಾಮ್ ಬಂಗಲೆ* ಯನ್ನು (೧೮೯೨ರಲ್ಲಿ ಸ್ವಾಮೀಜಿಯವರ ವಾಸದಿಂದ ಇದು ಪಾವನಗೊಂಡಿದೆ) ಉದ್ಘಾಟಿಸಲಾಯಿತು.

**ಭಾರತದ ಹೊರಗೆ** ಈ ಕೆಳಗಿನ **ಹೊಸ ಯೋಜನೆಗಳು** ಉಲ್ಲೇಖನೀಯ:

(೧) ಸ್ವಾಮೀಜಿ ೧೮೯೭ರಲ್ಲಿ ಭೇಟಿ ನೀಡಿದ ಶ್ರೀ ಪೊನ್ನಂಬಾಳ್ ವನೇಶ್ವರರ್ ದೇವಸ್ಥಾನದಲ್ಲಿ **ಕೊಲಂಬೋ** ಕೇಂದ್ರದ ವತಿಯಿಂದ ಸ್ವಾಮೀಜಿಯವರ ಕಂಚಿನ ವಿಗ್ರಹವನ್ನು ಅನಾವರಣಗೊಳಿಸಲಾಯಿತು; (೨) **ಸಾಕ್ರಮೆಂಟೊ** ಕೇಂದ್ರದ ಸುವರ್ಣ ಮಹೋತ್ಸವವನ್ನು ಆಚರಿಸಲಾಯಿತು; (೩) **ಫಿಜಿ** ಕೇಂದ್ರದ ಸ್ವಾಮಿ ವಿವೇಕಾನಂದ ಕಾಲೇಜಿನಲ್ಲಿ ನೂತನವಾಗಿ ನಿರ್ಮಿಸಿದ ಯುನಿವರ್ಸಲ್ ಮೆಡಿಟೇಶನ್ ಸೆಂಟರ್‌ಅನ್ನು ಉದ್ಘಾಟಿಸಲಾಯಿತು.

ಈ ವರ್ಷದ ಅವಧಿಯಲ್ಲಿ **ರಾಮಕೃಷ್ಣ ಮಠ ಮತ್ತು ಮಿಷನ್ ಸಮಾಜ ಕಲ್ಯಾಣ ಕಾರ್ಯಕ್ರಮಗಳ** ಅಡಿಯಲ್ಲಿ ಬಡ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ, ವೃದ್ಧರಿಗೆ, ರೋಗಿಗಳಿಗೆ ಹಾಗೂ ನಿರ್ಗತಿಕರಿಗೆ ಆರ್ಥಿಕ ನೆರವು ಇತ್ಯಾದಿಗಳನ್ನು ನೀಡಲಾಯಿತು. (ಸುಮಾರು ೮.೨೨ ಲಕ್ಷ ಫಲಾನುಭವಿಗಳಿಗೆ); ಇವುಗಳಿಗೆ ೧೪.೭೪ ಕೋಟಿ ರೂಪಾಯಿಗಳು ವಿನಿಯೋಗವಾಗಿವೆ.

**ವೈದ್ಯಕೀಯ ಸೇವೆ**ಗಳನ್ನು ೮೧.೬೨ ಲಕ್ಷಕ್ಕಿಂತ ಹೆಚ್ಚು ಜನರಿಗೆ ೧೦ ಆಸ್ಪತ್ರೆಗಳು, ೭೪ ಚಿಕಿತ್ಸಾಲಯಗಳು, ೪೪ ಸಂಚಾರಿ ವೈದ್ಯಕೀಯ ಘಟಕಗಳು ಹಾಗೂ ೯೬೩ ವೈದ್ಯಕೀಯ ಶಿಬಿರಗಳ ಮೂಲಕ ೧೬೭.೦೮ ಕೋಟಿ ರೂಪಾಯಿಗಳ ವೆಚ್ಚದಲ್ಲಿ ನೀಡಲಾಯಿತು.

**ಶೈಕ್ಷಣಿಕ ಕಾರ್ಯಕ್ರಮಗಳಿಗೆ** ಮೊತ್ತ ೨೬೭ ಕೋಟಿ ರೂಪಾಯಿಗಳು ವಿನಿಯೋಗವಾಗಿವೆ. ಅಸಾಂಪ್ರದಾಯಿಕ ಶಿಕ್ಷಣ ವಿಭಾಗಗಳು, ರಾತ್ರಿ ಶಾಲೆಗಳು, ಖಾಸಗಿ ತರಗತಿಗಳು ಇತ್ಯಾದಿಗಳ ಜೊತೆಗೆ ಶಿಶುವಿಹಾರದಿಂದ ಹಿಡಿದು ವಿಶ್ವವಿದ್ಯಾಲಯದ ವರೆಗಿರುವ ನಮ್ಮ ವಿದ್ಯಾಸಂಸ್ಥೆಗಳಲ್ಲಿ ಸುಮಾರು ೩.೧೮ ಲಕ್ಷ ವಿದ್ಯಾರ್ಥಿ–ವಿದ್ಯಾರ್ಥಿನಿಯರು ಶಿಕ್ಷಣ ಪಡೆಯುತ್ತಿದ್ದಾರೆ.

**ಗ್ರಾಮೀಣ ಹಾಗೂ ಬುಡಕಟ್ಟು ಜನಾಂಗದವರಿಗಾಗಿ** ನಡೆಸಿದ ಹಲವಾರು **ಅಭಿವೃದ್ಧಿ ಯೋಜನೆ**ಗಳಿಂದ ಸುಮಾರು ೧೬.೯೬ ಲಕ್ಷ ಜನರು ಲಾಭ ಪಡೆದರು ಹಾಗೂ ೧೧.೭೪ ಕೋಟಿ ರೂಪಾಯಿಗಳನ್ನು ವ್ಯಯಿಸಲಾಯಿತು.

ದೇಶದ ವಿವಿಧ ಭಾಗಗಳಲ್ಲಿ ಹಲವಾರು **ಪರಿಹಾರ ಮತ್ತು ಪುನರ್ವಸತಿ ನಿರ್ಮಾಣ** ಕಾರ್ಯಗಳನ್ನು ಹಮ್ಮಿಕೊಳ್ಳಲಾಯಿತು. ಸುಮಾರು ೬.೩೪ ಕೋಟಿ ರೂಪಾಯಿಗಳ ವೆಚ್ಚದಲ್ಲಿ ನಡೆದ ಈ ಕಾರ್ಯಗಳಿಂದ ೧.೧೮ ಲಕ್ಷ ಕುಟುಂಬಗಳಿಗೆ ಸೇರಿದ ೨.೯೮ ಲಕ್ಷ ಜನರು ನೆರವನ್ನು ಪಡೆದಿದ್ದಾರೆ.

ಈ ಸಂದರ್ಭದಲ್ಲಿ ಸಂಸ್ಥೆಯ ಸರ್ವಸದಸ್ಯರಿಗೂ, ಸ್ನೇಹಿತರಿಗೂ ಅವರ ಸಹಾಯ ಸಹಕಾರಗಳಿಗಾಗಿ ನಮ್ಮ ಹೃತ್ಪೂರ್ವಕ ಧನ್ಯವಾದಗಳನ್ನು ಸಮರ್ಪಿಸುತ್ತೇವೆ.

೨೭ ಡಿಸೆಂಬರ್, ೨೦೧೫ (ಸ್ವಾಮಿ ಸುಹಿತಾನಂದ)

ಪ್ರಧಾನ ಕಾರ್ಯದರ್ಶಿ

## ಸ್ವಾಮಿ ವಿವೇಕಾನಂದರ ೧೫೦ನೇ ಜಯಂತಿಯ ಆಚರಣೆ

ಕೇಂದ್ರ ಸರಕಾರದ ಅನುದಾನದಿಂದ ೮.೧೦.೨೦೧೦ ರಿಂದ ೩೧.೧೦.೨೦೧೪ ರ ವರೆಗೆ ನಡೆದಿರುವ ಸೇವಾಕಾರ್ಯ ಯೋಜನೆಗಳ ಅಂತಿಮ ವರದಿ:

(೧) **ಗದಾಧರ ಅಭ್ಯುದಯ ಪ್ರಕಲ್ಪ** (ಮಕ್ಕಳ ಸರ್ವತೋಮುಖ ಬೆಳವಣಿಗೆ): ೧೭೪ ಘಟಕಗಳ ಮೂಲಕ ೨೩ ರಾಜ್ಯಗಳಲ್ಲಿ ಸುಮಾರು ೧೮,೩೦೦ ಮಕ್ಕಳಿಗೆ ಸಹಾಯವೊದಗಿಸಲಾಗಿದೆ. ವ್ಯಯವಾದ ಮೊತ್ತ ೨೫.೬೫ ಕೋಟಿ ರೂಪಾಯಿಗಳು.

(೨) **ವಿವೇಕನಂದ ಸ್ವಾಸ್ಥ್ಯ ಪರಿಸೇವಾ ಪ್ರಕಲ್ಪ** (ತಾಯಿ–ಮಕ್ಕಳ ಸ್ವಾಸ್ಥ್ಯ ಸೇವಾ ಯೋಜನೆ): ೧೨೬ ಘಟಕಗಳ ಮೂಲಕ ೨೨ ರಾಜ್ಯಗಳಲ್ಲಿ ಸುಮಾರು ೧೩,೭೦೦ ತಾಯಿ ಹಾಗೂ ಮಕ್ಕಳಿಗೆ ಸಹಾಯವೊದಗಿಸಲಾಗಿದೆ. ವ್ಯಯವಾದ ಮೊತ್ತ ೧೭.೯೮ ಕೋಟಿ ರೂಪಾಯಿಗಳು.

(೩) **ಸಾರದಾ ಪಲ್ಲಿ ವಿಕಾಸ ಪ್ರಕಲ್ಪ** (ಮಹಿಳೆಯರ ಸ್ವಾವಲಂಬನೆ): ೮ ರಾಜ್ಯಗಳ ೧೧ ಗ್ರಾಮಗಳಲ್ಲಿ ಸುಮಾರು ೩,೧೯೪ ಮಹಿಳೆಯರಿಗೆ ಸಹಾಯವೊದಗಿಸಲಾಗಿದೆ. ವ್ಯಯವಾದ ಮೊತ್ತ ೨.೦೪ ಕೋಟಿ ರೂಪಾಯಿಗಳು.

(೪) **ಸ್ವಾಮಿ ಅಖಂಡಾನಂದ ಸೇವಾ ಪ್ರಕಲ್ಪ** (ದಾರಿದ್ರ್ಯ ಉಪಶಮನ): ಒಟ್ಟಾರೆಯಾಗಿ ೩,೧೦೯ ಜನರಿಗೆ ಸಹಾಯವೊದಗಿಸಿದ ೧೨ ಘಟಕಗಳನ್ನು ೭ ರಾಜ್ಯಗಳಲ್ಲಿ ನಡೆಸಲಾಗಿದೆ. ವ್ಯಯವಾದ ಮೊತ್ತ ೨.೦೧ ಕೋಟಿ ರೂಪಾಯಿಗಳು.

(೫) **ವಿಶೇಷ ಸೇವಾ ಕಾರ್ಯಗಳು** (ಉದ್ಯೋಗಿಗಳಿಗೆ ಹಾಗೂ ಪಾಲಕರಿಗೆ): ೧೩ ರಾಜ್ಯಗಳ ಸುಮಾರು ೫೦,೮೬೩ ಜನ ಪ್ರಯೋಜನ ಪಡೆದಿದ್ದಾರೆ. ವ್ಯಯವಾದ ಮೊತ್ತ ೯೯.೩೨ ಲಕ್ಷ ರೂಪಾಯಿಗಳು.

(೬) **ಮುದ್ರಣ ಸಮೂಹ ಮಾಧ್ಯಮ ಯೋಜನೆ:** ಒಟ್ಟಾರೆಯಾಗಿ ೪೯.೫೫ ಲಕ್ಷ ಪುಸ್ತಕದ ಪ್ರತಿಗಳು ಅಚ್ಚಾಗಿವೆ. ಅವುಗಳಲ್ಲಿ ಸ್ವಾಮೀಜಿಯವರ ಜೀವನ–ಸಂದೇಶಗಳಿಗೆ ಸಂಬಂಧಿಸಿದಂತೆ ೨೪ ಭಾರತೀಯ ಭಾಷೆಗಳಲ್ಲಿ ಮತ್ತು ೩ ವಿದೇಶೀಯ ಭಾಷೆಗಳಲ್ಲಿ (ಜರ್ಮನ್, ಜಪಾನೀಸ್, ಮತ್ತು ಝುಲು) ೪೯.೫೫ ಲಕ್ಷ ಪ್ರತಿಗಳು, ಭಾರತದ ರಾಷ್ಟ್ರೀಯ ನಾಯಕರನ್ನು ಕುರಿತಾಗಿ ೭೫,೦೦೦ ಪ್ರತಿಗಳು, ಕಲ್ಚರಲ್ ಹೆರಿಟೇಜ್ ಆಫ್ ಇಂಡಿಯಾ – ೧೧೦೦ ಪ್ರತಿಗಳು (೮ ಭಾಗಗಳಲ್ಲಿ). ಸ್ವಾಮಿ ವಿವೇಕಾನಂದರ ಸಂಪೂರ್ಣ ಕೃತಿಗಳು – ೧೨೦೦ ಪ್ರತಿ (೯ ಭಾಗಗಳಲ್ಲಿ). ವ್ಯಯವಾದ ಮೊತ್ತ ೬.೧೬ ಕೋಟಿ ರೂಪಾಯಿಗಳು.

(೭) **ಯುವ ಜನತೆಗೆ ವಿಶೇಷ ಕಾರ್ಯಕ್ರಮಗಳು:** ೧೨ ನಗರಗಳಲ್ಲಿ ಯುವಜನರಿಗೆ ಆಪ್ತರಸಲಹಾ ಕೇಂದ್ರಗಳು – ೪೮,೭೧೪ ಯುವಜನರು ಸಲಹೆಗಳನ್ನು ಪಡೆದರು: ೩ ರಾಷ್ಟ್ರಮಟ್ಟದ, ೬ ಪ್ರಾದೇಶಿಕ ಮಟ್ಟದ, ೧೮ ರಾಜ್ಯಮಟ್ಟದ ಯುವಸಮ್ಮೇಳನಗಳ/ಶಿಬಿರಗಳ ಆಯೋಜನೆ – ಒಟ್ಟು ೮೮,೬೦೦ ಜನರು ಭಾಗವಹಿಸಿದರು; ನಿಬಂಧ ಬರಹ ಮತ್ತು ರಸಪ್ರಶ್ನೆ ಸ್ಪರ್ಧೆಗಳು ಮುಂತಾದವನ್ನು ಆಯೋಜಿಸಲಾಯಿತು; ಸತತ ಹಾಗೂ ಕ್ರಮಿಕ ಮೌಲ್ಯಶಿಕ್ಷಣ ಕಾರ್ಯಕ್ರಮಗಳ ನಿರ್ವಹಣೆ – ಈ ಕೆಳಗಿನ ಯೋಜನೆಗಳ ಮೂಲಕ: (ಅ) ೧೪ ರಾಜ್ಯಗಳಲ್ಲಿ ೨೪೬ ಸಂಸ್ಥೆಗಳ ೧೭,೯೦೪ ವಿದ್ಯಾರ್ಥಿಗಳೊಂದಿಗೆ ೩೯೭ (ಅಸಾಂಪ್ರದಾಯಿಕ ರೀತಿಯ) ಘಟಕಗಳ ಮೂಲಕ; ಹಾಗೂ (ಆ) ೧೮ ರಾಜ್ಯಗಳಲ್ಲಿ ೭೭೪ ಶಾಲೆಗಳ ೧,೨೩,೧೬೫ ವಿದ್ಯಾರ್ಥಿಗಳೊಂದಿಗೆ ೨,೯೬೨ (ಸಾಂಪ್ರದಾಯಿಕ ತರಗತಿಗಳಿಗೆ ಸೇರಿದ) ಘಟಕಗಳ ಮೂಲಕ. ಮೊತ್ತ ೨೮.೭೪ ಕೋಟಿ ರೂಪಾಯಿ ವೆಚ್ಚತಗಲಿದೆ.

(೮) **ಎಲೆಕ್ಟ್ರಾನಿಕ್ ಸಮೂಹ ಮಾಧ್ಯಮ ಯೋಜನೆ:** ‘ವಿಮೆನ್ ಆಫ್ ಇಂಡಿಯಾ’ ಮತ್ತು ‘ಎ ಪೊಯೆಟ್, ಎ ಮ್ಯಾನ್, ಎ ಮಾಂಕ್’ ಡಾಕ್ಯುಮೆಂಟರಿ ಚಲನಚಿತ್ರ, *ಪರ್ಸನಾಲಿಟಿ ಡೆವೆಲಪ್‌ಮೆಂಟ್* ಇ–ಬುಕ್, *ಎಜುಕೇಶನ್* ಮಲ್ಟಿಮೀಡಿಯಾ ಪ್ರೆಸೆಂಟೇಶನ್, ಎಲ್ಲವೂ ಸ್ವಾಮೀಜಿಯವರ ಬೋಧನೆಗಳ ಆಧಾರಿತ. ಬಡವರ ಕುರಿತಾಗಿ ನಡೆಸುತ್ತಿರುವ ಕಾರ್ಯಗಳ ಕಿರುಚಿತ್ರ *ರೈಸಿಂಗ್ ಇಂಡಿಯಾ;* ದೂರದರ್ಶನದಲ್ಲಿ ಪ್ರಸಾರಿತವಾದ ೨೬ ಕಂತುಗಳ ಯುವಜನತೆಗೆ ಸಂವಾದ ಕಾರ್ಯಕ್ರಮ *ವಿವೇಕಾನಂದ ಆನ್ಸರ್ಸ್.* ಮೊತ್ತ ೨.೮೭ ಕೋಟಿ ರೂಪಾಯಿ ವೆಚ್ಚತಗಲಿದೆ.

(೯) **ಸಾಂಸ್ಕೃತಿಕ ಕಾರ್ಯಕ್ರಮಗಳ ಯೋಜನೆ:** ‘೨೧ನೇ ಶತಮಾನದ ಸವಾಲುಗಳನ್ನು ಎದುರಿಸುವಲ್ಲಿ ಸ್ವಾಮಿ ವಿವೇಕಾನಂದರ ಪ್ರಸ್ತುತತೆ’, ‘ಧಾರ್ಮಿಕ ಸಮನ್ವಯ’, ‘ಅನೇಕತೆಯಲ್ಲಿ ಏಕತೆ’ ಮುಂತಾದವುಗಳನ್ನು ಕುರಿತಾಗಿ ೨ ಅಂತರರಾಷ್ಟ್ರೀಯ, ೧ ರಾಷ್ಟ್ರ ಮಟ್ಟದ, ೩ ಪ್ರಾದೇಶಿಕ ಮಟ್ಟದ, ೧೦ ರಾಜ್ಯಮಟ್ಟದ ಮತ್ತು ೫ ಪ್ರಾದೇಶಿಕ ಮಟ್ಟದ ವಿಚಾರಗೋಷ್ಠಿಗಳ ಆಯೋಜನೆ; ೧೯ ಶಾಸ್ತ್ರೀಯ ಸಂಗೀತ ಕಾರ್ಯಕ್ರಮಗಳ ಆಯೋಜನೆ. ವ್ಯಯವಾದ ಮೊತ್ತ ೫.೩೪ ಕೋಟಿ ರೂಪಾಯಿಗಳು.

ಒಟ್ಟಾರೆ ಮೇಲಿನ ಎಲ್ಲಾ ಯೋಜನೆಗಳಿಗೆ ೯೩ ಕೋಟಿ ರೂಪಾಯಿಗಳನ್ನು ವ್ಯಯ ಮಾಡಲಾಗಿದೆ.

Managing Editor : Swami Muktidananda Editor : Swami Jnanayogananda
Printed and Published by Swami Muktidananda, on behalf of Sri Ramakrishna Ashrama, Yadavagiri, Mysore and Printed at Mayur Graphics, No.C-12, Industrial Estate, Rajaji Nagar, Bangalore -560 010 and published at Sri Ramakrishna Ashrama, Yadavagiri, Mysore -570 020

